# ಸಪ್ತಗಿರಿ

ಬೆಲೆ: ರೂ. ೧









ಮಾರ್ಚ್ 1992



ವೇದಶಾಸ್ತ್ರಗಳ
ರಾಷ್ಟ್ರೀಯ ಸಮ್ಮೇಳನ
ವಿಶೇಷ ಸಂಚಿಕೆ





ತಿರುಮಲ ತಿರುಪತಿ
ದೇವಸ್ಥಾನಗಳ
ಸಚಿತ್ರ ಮಾಸ ಪತ್ರಿಕೆ





ನಾನೇನು ಮಾಡಿದೆನೋ ವೆಂಕಟರಾಯ
ನೀನೆನ್ನ ಕಾಯವೇಕೋ || ಪ ||

ಮಾನಾಪಮಾನ ನಿನ್ನದು ಎನಗೇನು
ದೀನರಕ್ಷಕ ತಿರುಪತಿಯ ವೆಂಕಟರಾಯ || ಅಪ ||

ರಕ್ಕಸನಲ್ಲವೇನೋ ಪ್ರಹ್ಲಾದನು
ಚಿಕ್ಕವ ಧ್ರುವನಲ್ಲವೆ
ಉಕ್ಕಿ ಬರುವ ಕರ್ಮ ಮಾಡಿದಜಮಿಳ ನಿಮ್ಮ
ಅಕ್ಕನ ಮಗನೇನೋ ವೆಂಕಟರಾಯ || ೧ ||

ಕರಿರಾಜ ಕರೆಸಿದನೆ ದ್ರೌಪದಾದೇವಿ
ಬರೆದೋಲೆ ಕಳುಹಿದಳೆ
ವರಋುಷಿ ಪತ್ನಿ ಕಲ್ಲಾಗಿ ಸ್ತ್ರೀಯಾದದ್ದು
ಧರೆಯೆಲ್ಲ ಅರಿಯದೇನೋ ವೆಂಕಟರಾಯ || ೨ ||

ಒಪ್ಪಿಡಿಯವಲಕ್ಕಿಯ ತಂದವನಿಗೆ
ಒಪ್ಪಿ ಕೊಟ್ಟೆಯೊ ಭಾಗ್ಯವ
ಸರ್ಪಶಯನ ಶ್ರೀ ಪುರಂದರವಿಠಲ
ಅಪ್ರಮೇಯನೆ ಸಲಹೋ ವೆಂಕಟರಾಯ || ೩ ||

—ಶ್ರೀ ಪುರಂದರದಾಸರು

ಸಂದರ್ಶಿಸಿ ಆನಂದಿಸಿ

# ಶ್ರೀ ಕೋದಂಡರಾಮಸ್ವಾಮಿ ದೇವಾಲಯ, ತಿರುಪತಿ





# ವಾರ್ಷಿಕ ಬ್ರಹ್ಮೋತ್ಸವಗಳು

**30-3-92 ರಿಂದ 8-4-92**

**ಕಾರ್ಯಕ್ರಮ ವಿವರ**

| ದಿನಾಂಕ | ದಿನ | ಹಗಲು | ರಾತ್ರಿ |
|---|---|---|---|
| 30-3-92 | ಸೋಮವಾರ | | ಸೇನಾಧಿಪತಿ ಉತ್ಸವ, ಅಂಕುರಾರ್ಪಣೆ |
| 31-3-92 | ಮಂಗಳವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 1-4-92 | ಬುಧವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 2-4-92 | ಗುರುವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 3-4-92 | ಶುಕ್ರವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 4-4-92 | ಶನಿವಾರ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | ಗರುಡವಾಹನ |
| 5-4-92 | ಭಾನುವಾರ | ಹನುಮದ್ವಾಹನ | |
| | | ಸಂಜೆ - ವಸಂತೋತ್ಸವ | ಗಜವಾಹನ |
| 6-4-92 | ಸೋಮವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 7-4-92 | ಮಂಗಳವಾರ | ರಥೋತ್ಸವ | ಅಶ್ವವಾಹನ |
| 8-4-92 | ಬುಧವಾರ | ಚಕ್ರಸ್ನಾನ | ಧ್ವಜಾವರೋಹಣ |

ಸೂಚನೆ ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು ಶ್ರೀ ಕೋದಂಡರಾಮಸ್ವಾಮಿ ದೇವಾಲಯ ತಿರುಪತಿಯ ರೈಲ್ವೆ ನಿಲ್ದಾಣದಿಂದ ಅಲಿಪಿರಿಗೆ ಹೋಗುವ ಮಾರ್ಗದಲ್ಲಿ ಅರ್ಧಮೈಲು ದೂರದಲ್ಲಿದೆ ನಡೆದೂ ಹೋಗಿಬರಬಹುದು ಹೆಚ್ಚಿನ ವಿವರಗಳಿಗೆ ಬಳಿಯಲ್ಲಿನ ತಿ ತಿ ದೇವಸ್ಥಾನಗಳ ವಿಚಾರಣಾ ಕೇಂದ್ರದಲ್ಲಿ ವಿಚಾರಿಸಿ

ನೀವೂ ಬನ್ನಿ ತಿ ತಿ ದೇ ನಿಮ್ಮವರನ್ನೂ ಕರೆತನ್ನಿ




ಗೌರವ ಸಂಪಾದಕರು

ಶ್ರೀ ಎಂ ವಿ ಎಸ್ ಪ್ರಸಾದ್ ಐ ಎ ಎಸ್

ಕಾರ್ಯನಿರ್ವಹಣಾಧಿಕಾರಿ

ತಿ ತಿ ದೇ ತಿರುಪತಿ

ಸಂಪಾದಕ

ಕೆ ಸುಬ್ಬಾರಾವು ಎಂ ಎ

ಉಪಸಂಪಾದಕ

ಬಿ ಎನ್ ಶ್ರೀನಿವಾಸನ್ ಎಂ ಎ

ಮುದ್ರಣ

ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಮಿಕ್ಕ ವಿವರಗಳಿಗೆ

ಸಂಪಾದಕರು

ತಿರುಮಲೆ ತಿರುಪತಿ ದೇವಸ್ಥಾನಗಳು

ತಿರುಪತಿ

---

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ

ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು

---

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ —ಸಂ||


**ಸಂಪುಟ ೨೨]** **ಮಾರ್ಚ್ ೧೯೯೨** **[ಸಂಚಿಕೆ ೧೦**


# ವಿಷಯಸೂಚಿ



*ಆಂಗ್ಲ ಮೂಲದಿಂದ ಅನುವಾದ — ಬಿ ಎನ್ ಎಸ್

**ರಕ್ಷಾಪತ್ರ ಚಿತ್ರಸೂಚಿ** **ವೇದಶಾಸ್ತ್ರಗಳ ರಾಷ್ಟ್ರೀಯ ಸಮ್ಮೇಳನದ ಹಲವು ಹನ್ನೊಂದು ಉಲ್ಲೇಖನೀಯ ನೋಟಗಳು**

# ಸಂಪಾದಕೀಯ

ಹುಡುಕಿದರೆ ಭಗವಂತ ದೊರೆಯುತ್ತಾನೆ ಇದು ಭಾರತೀಯರು ಪರಂಪರೆಯಿಂದ ಪಡೆದಿರುವ ನಂಬಿಕೆಯೆನ್ನುವ ಮಾತು ಬಹುತೇಕ ಎಲ್ಲ ಭಾರತೀಯ ಭಾಷೆಗಳಲ್ಲೂ ಇದೇ ರೀತಿಯ ಅರ್ಥಕೊಡುವ ನಾಣ್ನುಡಿಗಳು ಜನಪದದ ನಾಲಗೆಯಲ್ಲಿ ನಿತ್ಯನರ್ತನ ಮಾಡುತ್ತವೆ ಎಂಬುದರಿಂದ ಸ್ಪಷ್ಟವಾಗುವ ಅಂಶ ಅವನೇ ಅನುಗ್ರಹಿಸದೆ ಅವನನ್ನು ಅರಿಯಲಾಗದು ಎಂಬ ಶಾಸ್ತ್ರವಾಕ್ಯೂ ಉಂಟಲ್ಲ – ಎಂದರೆ ಅದು ವಿದ್ವಾಂಸರ ಹಿರಿಯರ ಹಿರಿದಾದ ಚಿತ್ರವನ್ನು ಸಮಗ್ರವಾಗಿ ಕಂಡ ಕಾಣುವ ಶಕ್ತಿಯಿರುವವರ ಮಾತು ಎನ್ನಬೇಕಾಗುತ್ತದೆ ಜನಪದದ ಆಡುನುಡಿಯಲ್ಲಿ ಮನುಷ್ಯ ಪ್ರಯತ್ನಕ್ಕೆ ಅವಧಾರಣೆಯಿದ್ದು ಜೀವ ತನ್ನ ಉದ್ಧಾರಕ್ಕೆ ನಿರಂತರ ಶ್ರಮಿಸಬೇಕು ಎಂಬ ಎಚ್ಚರಿಕೆಯ ಧ್ವನಿಯೂ ಇದೆಯೆನ್ನಬೇಕು ಇಲ್ಲಿ ಭಗವಂತನ ತಿಳಿವು ಎನ್ನುವುದು ಇಮ್ಮುಖದ ಪಯಣದಿಂದ ಎಂದು ಸಮನ್ವಯ ಸಾಧಿಸಬಹುದು ನಾವು ಒಂದು ಹೆಜ್ಜೆಯಿಟ್ಟರೆ ಅವನು ಹತ್ತು ಹೆಜ್ಜೆಯ ದೂರ ಹಾಯ್ದು ಬಂದೆತ್ತಿಕೊಳ್ಳಬಲ್ಲ ಮಗು ನಡೆಯುವ ಪ್ರಯತ್ನ ಮಾಡುವುದನ್ನು ದೂರದಿಂದ ನೋಡಿ, ಓಡಿ ಬರುವ ತಾಯಿಯಂತೆ

ವೇದ ಹಾಗೂ ಶಾಸ್ತ್ರಗಳ ರಾಷ್ಟ್ರೀಯ ಸಮ್ಮೇಳನ ತಿರುಮಲೆಯಲ್ಲಿ ಆರು ದಿನಗಳ ಕಾಲ ನಡೆದು ಯಶಸ್ವಿಯಾಗಿ ಹಲವಾರು ದಿಸೆಗಳಲ್ಲಿ ಬೆಳಕು ಚೆಲ್ಲುವಲ್ಲಿ ಸಫಲವಾಗಿದೆ ಎರಡುಸಾವಿರಕ್ಕೂ ಮೀರಿದ ವಿದ್ವಾಂಸ ಪ್ರತಿನಿಧಿಗಳು ವಿವಿಧ ಧರ್ಮಪೀಠ ಪ್ರತಿಷ್ಠಾನಗಳ ಪ್ರಮುಖರೊಡನೆ ವೇದ ಶಾಸ್ತ್ರ ಪ್ರಾಚಾರ್ಯರೊಡನೆ ಸಮಾಜ ಸಂಸ್ಕೃತಿ ಸೇವಕರೊಡನೆ ತಿರುಮಲೆಯಲ್ಲಿ ಸೇರಿ ವೇದಗಳ ಬಗ್ಗೆ ವಿಶಾಲವಾದ ಅರಿವು ಬೆಳೆಯುವಂತೆ ಮಾಡಲು ಅವುಗಳಲ್ಲಿನ ಒಳಿತಿನ ತಿರುಳ ಪ್ರಯೋಜನವನ್ನು ಇಡೀ ಮಾನವಾಳಿಗೆ ತಲುಪಿಸಲು ಸಂಸ್ಕೃತಿ, ಸಾಹಿತ್ಯ ಧರ್ಮ ಇತಿಹಾಸಗಳ ಬಗ್ಗೆ ಹೊಸ ಹೆಚ್ಚಿನ ಬೆಳಕು ಬೀರಲು ಆ ಬೆಳಕಿನ ಬಳಕೆಯಾಗಲು ಶಿಕ್ಷಣ ಪ್ರಚಾರ ಪ್ರಕಟನೆ ಪ್ರಸಾರಗಳ ವಿವಿಧ ರಂಗಗಳಲ್ಲಿ ಉಂಟಾಗುವ ತೊಡಕುಗಳು ಸಮಸ್ಯೆಗಳು, ಎಡರುಗಳನ್ನು ಚರ್ಚಿಸಿ ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡು ಸಮ್ಮೇಳನದ ಫಲಶ್ರುತಿಯಾಗಿ ಹಲವಾರು ನಿರ್ಣಯಗಳಿಗೆ ಬಂದು ತಲುಪಿದ್ದಾರೆ

ಮಾರ್ಗದ ನಕ್ಷೆ ಸಿದ್ಧಗೊಳಿಸಿದ್ದು ಆಗಿದೆಯಾದರೂ ಆ ದಿಸೆಯಲ್ಲಿ ಪಥದಲ್ಲಿ ಕ್ರಮಣ ನಡೆಯಬೇಕಾಗಿದೆ ಇಡೀ ದೇಶದಲ್ಲಿನ ಸಂಸ್ಕೃತಿ, ವೇದಗಳ ಅಧ್ಯಯನ ಪ್ರಸಾರಕ್ಕಾಗಿ ಒಂದು ಉನ್ನತ ಮಟ್ಟದ ಪ್ರಾತಿನಿಧಿಕ ಪಂಡಿತ ಸಮಿತಿಯ ನಿರ್ಮಾಣ ಅಧ್ಯಯನದಲ್ಲಿ ಆಧುನಿಕ ಪರಿಕರಗಳಿಂದ ಪ್ರಯೋಜನ ಪಡೆಯುವ ಪ್ರಯತ್ನ ಪರಸ್ಪರ ಅವಗಾಹನೆಯಿಂದ ವಿಚಾರ ವಿನಿಮಯದಿಂದ ಒಟ್ಟು ಜನಾಂಗ ಮುಂದುವರೆಯುವ ಆಕಾಂಕ್ಷೆ – ಮೊದಲಾದವು ಈ ನಕ್ಷೆಯಲ್ಲಿ ಪ್ರಮುಖವಾದವು

ಇವುಗಳಿಗಾಗಿ ಕೆಲಸ ಮಾಡಬೇಕಾದವರು ಬೇರೆಬೇರೆ ಸಂಘ ಸಂಸ್ಥೆಗಳು ಸರ್ಕಾರಗಳು ಹಾಗೂ ಸಾರ್ವಜನಿಕರು ಸಂಬಂಧಪಟ್ಟವರಿಗೆಲ್ಲ ಈ ನಿರ್ಣಯಗಳ ಒಳ ಉದ್ದೇಶ ಪ್ರಾಮಾಣಿಕ ಕಾಳಜಿಗಳು ಅರ್ಥವಾಗಿ ಆಚರಣೆಗೆ ಬರುವಂತೆ ಆಗಲಿ ಎಂದು ಸಪ್ತಗಿರಿ ಹೃತ್ಪೂರ್ವಕ ಹಾರೈಸುತ್ತದೆ

ಇಲ್ಲಿಯೇ ಒಂದು ಎಚ್ಚರವನ್ನೂ ವಹಿಸಬೇಕಾದ ಅಗತ್ಯವಿದೆ ಇಂತಹ ಸಮ್ಮೇಳನಗಳು ಎಂದೋ ಒಮ್ಮೆ ನಡೆದು, ಹಲವು ನಿರ್ಣಯಗಳನ್ನುಂಟುಮಾಡಿ ಮುಗಿಯುವುದರಿಂದಲೇ ನಡೆದದ್ದು ಆಗದು ಅಲ್ಲಲ್ಲಿ ಆಗಾಗ – ಅದೇ ಪ್ರಮಾಣದಲ್ಲಿ ಅಲ್ಲದಿದ್ದರೂ – ನಡೆಯಬೇಕು ಜೊತೆಗೇ ಹಿಂದಿನ ಸಭೆ ಸಮಾರಂಭ ಗೋಷ್ಠಿಗಳಲ್ಲಿ ನಡೆದ ನಿರ್ಣಯಗಳ ಕಾರ್ಯಾಚರಣೆ ಎಲ್ಲಿಯವರೆಗೆ ಬಂದಿದೆಯೆಂಬುದನ್ನೂ ಗಮನಿಸಿ ಮುಂದುವರೆಯುವ ಹಾದಿಯಲ್ಲಿ ಲೋಪದೋಷಗಳಿಲ್ಲದಂತೆ ನೋಡಿಕೊಳ್ಳಬೇಕು

ಹೀಗೆ ನಿರಂತರ ಕೃಷಿಯಿಂದ ಮಾತ್ರವೇ ಸಾಫಲ್ಯವನ್ನು ಪಡೆಯಲು ಸಾಧ್ಯ ಎಂಬುದನ್ನು ಮನಗಾಣಬೇಕು ಆಗಲೇ ಅಂದುಕೊಂಡದಕ್ಕೆ ಸಾರ್ಥಕತೆ

ಸನಾತನಧರ್ಮದ ಸಹಿಷ್ಣುತೆ ಶಾಂತಿಗಳ ಸಂದೇಶ ಎಲ್ಲಕಡೆ ಹರಡಿ ಶಾಂತಿ ಸೌಹಾರ್ದಗಳು ಮೂಡಿಬರಲಿ ಎಂದು ಹಾರೈಸಿ ಅದನ್ನು ಕೈಗೂಡಿಸುವ ಕ್ರಮವನ್ನು ಆ ಸ್ವಾಮಿ ತೋರಿಸಲಿ ಎಂದು ಬೇಡುವ

– ಓಂ ಶಾಂತಿ ಶಾಂತಿ ಶಾಂತಿ –

***

# ವೈದಿಕ ವಿಜ್ಞಾನ ವೈವಿಧ್ಯ

ಶಾಂತಾಕಾರಂ ಭುಜಗ ಶಯನಂ
ವದ್ಮನಾಭಂ ಸುರೇಶಂ
ವಿಶ್ವಾಧಾರಂ ಗಗನ ಸದೃಶಂ
ಮೇಘವರ್ಣಂ ಶುಭಾಂಗಂ
ಲಕ್ಷ್ಮೀಕಾಂತಂ ಕಮಲನಯನಂ
ಯೋಗಿಭಿರ್ಧ್ಯಾನಗಮ್ಯಂ
ವಂದೇ ವಿಷ್ಣುಂ ಭವಭಯ ಹರಂ
ಸರ್ವ ಲೋಕೈಕನಾಥಂ

ಸಂಸ್ಕೃತದಲ್ಲಿರುವ ವೇದಶಾಸ್ತ್ರಗಳು ಭಾರತೀಯರಿಗೆ ಮಾತ್ರವೇ ಬಳುವಳಿಯಾಗಿ ಬಂದದ್ದಲ್ಲ ವು ಭಾರತೀಯರು – ಇಡೀ ಜಗತ್ತಿಗೆ ಮಾನವ ನಾಂಗಕ್ಕೆ ಮನುಷ್ಯ ಜ್ಞಾನಕ್ಕೆ – ನೀಡಿದ ಕೊಡುಗಳಾಗಿವೆ

ಐದು ಸಾವಿರ ವರ್ಷಗಳ – ಅದಕ್ಕಿಂತ ಹೆಚ್ಚವಾದರೂ – ದಾಖಲಾತಿ ಹೊಂದಿದ ಪರಂವರೆ ಭಾರತದ ಹೊರತು ಪ್ರವಂಚದ ಬೇರೊಂದು ದೇಶ ವಡೆದಿಲ್ಲ ಹಾಗಾಗಿ ಭಾರತೀಯರು ಸಕಾರಣವಾಗಿಯೇ ಹೆಮ್ಮೆ ವಡಬಹುದಾಗಿದೆ

ತಮ್ಮ ಗಮನವನ್ನು ಒಂದು ಶ್ಲಾಘನೀಯ ಅಂಶದತ್ತ ಸೆಳೆಯ ಬಯಸುತ್ತೇನೆ ನಮ್ಮ ಹಿರಿಯರು ವೈದಿಕ ಆಚಾರದ ಒಂದು ಸಂಸ್ಕೃತಿಯನ್ನು ಬೆಳೆಸಿದರು ಈ ಸಂಸ್ಕೃತಿ ವೈದಿಕ ಆಚಾರ ಗ್ರಂಥಗಳ ಆಧಾರ ಹೊಂದಿದ್ದು ಕಾಲ ಕಳೆದಂತೆ ಆಚಾರ ಗ್ರಂಥಗಳು ಪ್ರಾಚೀನವಾಗಿ ಗೊಜಲಾದವು ಹಾಗಾಗಿ ಈ ಗ್ರಂಥಗಳ ವಿವರಣೆಯನ್ನು ನೀಡಬಲ್ಲ ಸೂತ್ರಗಳ ಸಂಗ್ರಹವಾದ ಒಂದು ಜ್ಞಾನ ಶಾಖೆಯ ಅಗತ್ಯ ಉಂಟಾಯಿತು ವೈದಿಕ ವಾಕ್ಯದ ಬಗ್ಗೆ ಅನುಮಾನ ಬಂದಾಗ ಈ ಜ್ಞಾನಶಾಖೆ ಅನುಮಾನಕ್ಕೆ ಆಸ್ಪದವಾದ ವಾಕ್ಯದ ಬಗ್ಗೆ ಖಚಿತವಾದ ಅರ್ಥವನ್ನು ಯಜ್ಞಕರ್ತನಿಗೆ ನೀಡಬಲ್ಲ ಮೂಲಸೂತ್ರವನ್ನು ನೀಡುವಂತೆ ಇರಬೇಕು ಈ ಅಗತ್ಯವು ವಾಕ್ಯದ ಅರ್ಥವನ್ನು ನೀಡುವ ವಿಜ್ಞಾನಕ್ಕೆ ನಾಂದಿಯಾಯಿತು ಭಾರತೀಯ ತತ್ವಶಾಸ್ತ್ರದ ಮೀಮಾಂಸಾ ಶಾಖೆ ಇದೇ ಒಂದು ವಾಕ್ಯವನ್ನು ಹೇಳಿದವನ ಅಥವಾ ಬರೆದವನ ಉಪಸ್ಥಿತಿ ಇಲ್ಲದಿರುವಲ್ಲಿ ಆ ವಾಕ್ಯದ ಮೂಲ ಅರ್ಥವನ್ನು ತಿಳಿಯುವ ಬಗೆಯನ್ನು ಇದು ವಿವರಿಸುತ್ತದೆ

ಹೀಗೆಯೇ ಸಂಹಿತೆಗಳು ಶ್ರೌತಸೂತ್ರಗಳನ್ನೊಳಗೊಂಡಂತೆ ಎಲ್ಲ ಆಚಾರ ಸಾಹಿತ್ಯವೂ ಹೊರಹೊಮ್ಮಿರುವ ವೈದಿಕ ಭಾಷೆಯನ್ನು ತಿಳಿದುಕೊಳ್ಳಲು ಆ ಭಾಷೆಯ ವ್ಯಾಕರಣವನ್ನು ತಿಳಿಯುವ ಅಗತ್ಯವುಂಟಾಯಿತು ಇದರಿಂದಾಗಿ ವ್ಯಾಕರಣ ವಿಜ್ಞಾನದ ಆವಿರ್ಭಾವಕ್ಕೆ ಮಾರ್ಗವಾಯಿತು

ಮೌಖಿಕವಾಗಿ ಹರಿದು ಬಂದ ಸಂಹಿತೆಗಳನ್ನು ಯಾವುದೇ ಪ್ರಕ್ಷೇಪ ವಿಕ್ಷೇಪಗಳಿಲ್ಲದಂತೆ ಇಡಿಯಾಗಿ ಹಾಗೆಯೇ ರಕ್ಷಿಸಬೇಕಾಗಿ ಬಂದಿತು ಇದಕ್ಕೆ ಶಬ್ದಗಳು ಹೇಗೆ ಉಂಟಾಗುತ್ತವೆ ಎಂಬ




ಪರಿಜ್ಞಾನದ ಅಗತ್ಯವುಂಟಾಗಿ ಶಿಕ್ಷಾ ಪ್ರತಿಶಾಖ್ಯಗಳ ರೂಪದಲ್ಲಿ ಶಬ್ದಶಾಸ್ತ್ರಕ್ಕೆ ಬುನಾದಿಯಾಯಿತು

ಆಚಾರಗಳನ್ನು ಋತು ಕಾಲಮಾನಕ್ಕೆ ತಕ್ಕಂತೆ ನೆರವೇರಿಸಬೇಕು ಇದಕ್ಕೆ ಗ್ರಹಗತಿಗಳನ್ನು ತಿಳಿಯುವುದು ಅಗತ್ಯವಾಯಿತು ಹೀಗಾಗಿ ಖಗೋಳ ವಿಜ್ಞಾನ ಗಣಿತಗಳುಂಟಾದವು

**ಪ್ರೊ|| ಪಿ ಎಸ್ ರಾ ಪೂನ**

ನಿಮಗೆಲ್ಲರಿಗೂ ತಿಳಿದಿರುವಂತೆ ಆಚಾರ ಸಂಸ್ಕೃತಿ ಪವಿತ್ರ ಅಗ್ನಿಗೆ ನೈವೇದ್ಯ ನೀಡುವುದನ್ನು ಒಳಗೊಂಡಿದೆ ಅಂದಿನ ಸಮಾಜದ ಒಂದು ಭಾಗದ ಜನ ಇಂತಹ ಆಚಾರವನ್ನು ಅನುಷ್ಠಾನಕ್ಕೆ ತರುವುದರಲ್ಲಿ ಯಾವುದೇ ತೆರನಾದ ನ್ಯಾಯವನ್ನು ಕಾಣಲಿಲ್ಲ ಕಾರಣ ಅವರಿಗೆ ನೈವೇದ್ಯ ನೀಡುವುದು ಎಂದರೆ ಧನ ಹಾಗೂ ಶಕ್ತಿಯ ಅವವ್ಯಯವೆಂದು ತೋರಿತು ಹಾಗಾಗಿ ಇಂತಹ ಸಂಸ್ಕೃತಿಯ ಮುಂದುವರಿಕೆಯಲ್ಲಿನ ಸೂಕ್ತತೆಯನ್ನು ತಿಳಿಯಬಯಸಿದರು ಸಂಸ್ಕೃತಿಯ ಪರಿರಕ್ಷಣಕಾರರು ಅವರ ಪ್ರಶ್ನೆಗಳಿಗೆ ಸದುತ್ತರವನ್ನು ನೀಡಲು ಕಷ್ಟ ಪಡಬೇಕಾಯಿತು ಪ್ರಾಯಶ ಇದರಿಂದಾಗಿಯೇ ವಾದ ವಿಜ್ಞಾನ ಶಾಖೆ ಆರಂಭವಾಗಿರಬೇಕು ಕಾರಣ ವಾದಕ್ಕೆ ವ್ಯವಸ್ಥಿತವಾದ ಚೌಕಟ್ಟು ಇರಬೇಕು ಈ ಅಗತ್ಯ ಕಾಲಕ್ರಮದಲ್ಲಿ ನ್ಯಾಯ – ವೈಶೇಷಿಕ ತತ್ವ ಪದ್ಧತಿಗಳಿಗೂ ತರ್ಕ ಶಾಸ್ತ್ರಕ್ಕೂ ಎಡೆಮಾಡಿಕೊಟ್ಟಿತು

ವೈದಿಕ ಸಮಾಜ ಹೀಗೆ ವೈಜ್ಞಾನಿಕ ತಿಳುವಳಿಕೆಯಲ್ಲಿ ಶ್ರೀಮಂತವಾಗುತ್ತ ತಾತ್ವಿಕವಾದ ಸಮಸ್ಯೆಗಳಲ್ಲೂ ಆಸಕ್ತವಾಗಲು ತೊಡಗಿತು ವೈದಿಕ ಆಚಾರ ಸಂಸ್ಕೃತಿಯ ಮುಂದುವರಿಕೆಯ ವಿರುದ್ಧವಾಗಿ ಎದ್ದ ಪ್ರಶ್ನೆಗಳೇ ಅದರ ಪರಿರಕ್ಷಕರನ್ನು ಇತರ ಅನೇಕ ತಾತ್ವಿಕ ಅಂಶಗಳತ್ತ ಎಳೆದು ಅವುಗಳಿಂದಾಗಿ ಭಾರತದಲ್ಲಿನ ಅನೇಕ ಇತರ ತಾತ್ವಿಕ ಶಾಖೆಗಳುಂಟಾಗಲು ಕಾರಣವಾದವು

ಈ ಎಲ್ಲ ಅಂಶಗಳಿಂದ ತಿಳಿದುಬರುವ ಸಾರವೆಂದರೆ ವೈದಿಕ ಸಂಸ್ಕೃತಿಯ ಪರಿರಕ್ಷಣೆಯ ಪ್ರಯತ್ನದಲ್ಲಿ ಈ ಎಲ್ಲ ವಿಜ್ಞಾನ ಶಾಖೆಗಳೂ ಉದ್ಭವಿಸಿದವು ಎಂಬುದೇ ಆಗಿದೆ ಸಂಸ್ಕೃತಿಯ ಪರಿರಕ್ಷಕರು ತಮ್ಮ ಒಳಗನ್ನು ಪರಿಶೋಧಿಸಿಕೊಂಡು ತರ್ಕಬದ್ಧವೂ, ಸಮಾಧಾನಕರವೂ ಆದ ಉತ್ತರಗಳನ್ನು ನೀಡಬೇಕಿತ್ತು

ನಾವೀಗ ಮತ್ತೆ ಅಂಥದೇ ಪರಿಸ್ಥಿತಿಯನ್ನು ಎದುರಿಸುತ್ತಿದ್ದೇವೆ ವಿಜ್ಞಾನ ತಂತ್ರಜ್ಞಾನಗಳಲ್ಲಿನ ಪುರೋಭಿವೃದ್ಧಿಯಿಂದಾಗಿ ನಮಗೆ ಭೌತಿಕ

ಅನುಕೂಲಗಳುಂಟಾಗಿವೆಯಾದರೂ ಜೀವನದಲ್ಲಿ ಸಮರಸತೆಯನ್ನು ತರುವಲ್ಲಿ ಘೋರವಾಗಿ ವಿಫಲಗೊಂಡಿವೆ ಅವುಗಳ ಅಂತಸತ್ವಕ್ಕೆ ಅತೀತವಾದ ವಿಷಯದಲ್ಲಿ ವಿಜ್ಞಾನ ತಂತ್ರಜ್ಞಾನಗಳನ್ನು ನಿಂದಿಸುವುದೇಕೆ?" ವಿಜ್ಞಾನ ತಂತ್ರಜ್ಞಾನಗಳು ಮಾನವ ಜೀವನದ ಸಾಧನಗಳು ಮಾತ್ರವೇ ಹೊರತು ಸಾಧ್ಯ - ಗುರಿ ಅಲ್ಲ

ಪ್ರತಿಯೊಬ್ಬ ಮಾನವನಿಗೂ ಅಂತರಂಗ ಜಗತ್ತೊಂದು ಇದ್ದು, ಬಹಿರಂಗಜಗತ್ತು ಇನ್ನೊಂದಿರುತ್ತದೆ ಬಾಹ್ಯಜಗತ್ತಿನಲ್ಲೂ ವಿಜ್ಞಾನ ಹಾಗೂ ತಂತ್ರಜ್ಞಾನಗಳು ಸ್ವಲ್ಪ ಮಾತ್ರವೇ ಪ್ರವೇಶ ಪಡೆದಿವೆ ಎಂದ ಮೇಲೆ ಅಂತರಂಗ ಜಗತ್ತಿನ ಬಗ್ಗೆ ಏನು ಹೇಳುವುದು? ಅವು ಅಲ್ಲಿಗೆ ಸೇರಲಾರವು ಪ್ರಾಚೀನ ಭಾರತೀಯ ಮಾನವ ವಿಜ್ಞಾನಿಗಳು ಮನುಷ್ಯನ ಅಂತರಂಗ ಜಗತ್ತಿನ ಬಗ್ಗೆ ಹೆಚ್ಚಿಗೆ ಯೋಚಿಸಿ ಅವನಿಗೆ ಅತ್ಯಂತ ವೈಯಕ್ತಿಕವಾದ ಅದನ್ನು - ಯಾವುದಕ್ಕಾಗಿ ಅವನು ಹುಟ್ಟಿದ್ದಾನೆಯೋ ಅದನ್ನು-ಶ್ರೀಮಂತಗೊಳಿಸಲು ಪ್ರಯತ್ನಿಸಿದರು ಅದೇ ಯೋಗವಿಜ್ಞಾನ ಯೋಗ ವಿಜ್ಞಾನದ ಸೊಬಗು ಎಂದರೆ, ಒಬ್ಬ ಅಂತರಂಗ ಜೀವನವನ್ನು ಒಮ್ಮೆ ತಿಳಿದನೆಂದರೆ ಅವನಿಗೆ ಇಡೀ ಜಗತ್ತು - ಬಾಹ್ಯ ಪ್ರಪಂಚವೂ ತಿಳಿಯುತ್ತದೆ (ತೇನ ಜ್ಞಾತೇನ ಸರ್ವಂ ವಿಜ್ಞಾತಂ ಭವತಿ)

ನಾವು ನಮ್ಮ ಪ್ರಾಚೀನ ಗ್ರಂಥಗಳನ್ನು ಇಂದಿನ ಸಂದರ್ಭದಲ್ಲಿ ಪುನ ಅರ್ಥೈಸಿಕೊಳ್ಳಬೇಕಾದ ಸಮಯ ಪ್ರಾಪ್ತವಾಗಿದೆ ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆ ಒಂದು ನಿರ್ದಿಷ್ಟ ಗುರಿಯನ್ನು ಒಳಗೊಂಡಿದ್ದು ಮನುಷ್ಯ ತನ್ನ ಅಂತರಂಗ ಆತ್ಮದ ಬೆಳವಣಿಗೆಗೆ ಅದರ ಸದುಪಯೋಗಗೊಳಿಸಿಕೊಳ್ಳಬೇಕೆಂದು ಹೇಳಬೇಕಾದ ಕರ್ತವ್ಯ ಸಮಾನ ಆಲೋಚನಾ ಶಕ್ತಿಯ ಎಲ್ಲ ವ್ಯಕ್ತಿ ಸಂಸ್ಥೆಗಳದ್ದಾಗಿದೆ ಮನುಷ್ಯ ಜೀವನದ ಗುರಿಯೇ ಆತ್ಮದ ಅರಿವನ್ನು ಪಡೆಯುವಿಕೆಯಾಗಿರುವುದರಿಂದ ವಿಜ್ಞಾನ ತಂತ್ರಜ್ಞಾನಗಳು ಎಷ್ಟರ ಮಟ್ಟಿಗೆ ಇಲ್ಲಿ ನೆರವು ನೀಡಬಲ್ಲವು ಎಂಬುದನ್ನು ನಿರ್ಣಯಿಸಬೇಕಿದೆ ವೈಜ್ಞಾನಿಕ ಹಾಗು ತಾಂತ್ರಿಕ ಅಭಿವೃದ್ಧಿಯ ಪ್ರಾಮುಖ್ಯವನ್ನು ಅಲ್ಲಗಳೆಯುವಂತಿಲ್ಲ ಎಂಬುದನ್ನು ಮರೆಯಬಾರದಾದರೂ ಅವುಗಳ ಮಿತಿಗಳನ್ನು ತಿಳಿಯುವುದು ಸೂಕ್ತ ಭೌತಿಕ ಅನುಕೂಲವೇ ಜೀವನದ ಗಮ್ಯವಲ್ಲ ನಮ್ಮ ಹಿರಿಯರು ಈ ಸತ್ಯವನ್ನು ತಿಳಿದಿದ್ದರು - ಎಂತಲೇ ಪ್ರಾಯಶ ಅವರು ಅಣ್ವಸ್ತ್ರ ತಯಾರಿಕೆಗಿಂತ ಹೆಚ್ಚಿನ ಪ್ರಾಮುಖ್ಯವನ್ನು ಆತ್ಮದ ಬೆಳವಣಿಗೆಗೆ ನೀಡಿದರು

ಅವರು ಭೌತಿಕ ವಿಜ್ಞಾನಗಳ ಬೆಳವಣಿಗೆಗೆ ಎಷ್ಟು ಕಡಮೆ ಪ್ರಾಮುಖ್ಯತೆಯನ್ನು ನೀಡಿದರೂ ಅವು ಶಾಶ್ವತ ಗುರುತುಗಳಾಗಿವೆಯೆಂಬುದು ಆಸಕ್ತಿದಾಯಕ ತರ್ಕಶಾಸ್ತ್ರ (ನ್ಯಾಯ) ಅರ್ಥವಿವರಣ ಶಾಸ್ತ್ರ (ಮೀಮಾಂಸೆ) ಖಗೋಳ ಹಾಗೂ ಗಣಿತ (ಗ್ರಹಗಣಿತ) ವೈದ್ಯ (ಆಯುರ್ವೇದ) ಭಾಷೆಯ ಶಾಸ್ತ್ರ ವ್ಯಾಕರಣ ಶಬ್ದ ಶಾಸ್ತ್ರ (ಶಿಕ್ಷಾ) ಇವೆಲ್ಲ ಮೇಲಿನ ಹೇಳಿಕೆಗೆ ಸಾಕ್ಷಿಯಾಗಬಲ್ಲವು ಇವೆಲ್ಲ ವೈದಿಕ ಸಂಸ್ಕೃತಿಯ ಕೊಡುಗೆಗಳಾಗಿವೆ

ಇಂದಿಗೂ ಈ ವಿಜ್ಞಾನಗಳು - ಶಾಸ್ತ್ರಗಳು - ತಮ್ಮ ಪ್ರಾಧಾನ್ಯವನ್ನು ಕಳೆದುಕೊಂಡಿಲ್ಲ

ಆದರೆ ಒಂದು ಸಂಗತಿಯನ್ನು ಗಮನಿಸಬೇಕು ಅಂದು ಈ ಶಾಸ್ತ್ರಗಳುಂಟಾದಾಗಿನಿಂದ ಬಹು ಕಾಲ ಕಳೆದು ಹೋಗಿದೆ ಜಗತ್ತಿನಾದ್ಯಂತ ಮನುಷ್ಯನ ಬೌದ್ಧಿಕ ಕ್ರಿಯೆಗಳ ಪ್ರತಿಫಲಗಳಿವು ಇಂದಿನ ವಿಜ್ಞಾನ ತಂತ್ರಜ್ಞಾನಗಳ ಅತ್ಯಂತ ಹಿರಿಯ ಕೊಡುಗೆಯೆಂದರೆ ಅವು ಜಗತ್ತನ್ನು ಜೀವನವನ್ನು ಹತ್ತಿರಗೊಳಿಸಿವೆಯೆಂಬುದು ಕಾಲ ವ್ಯಯವಾಗದೆ ಯಾವುದೇ ವೈಜ್ಞಾನಿಕ ವಿಭಾಗದಲ್ಲೂ ಸದ್ಯೋಜಾತ ಪರಿವರ್ತನೆಯನ್ನು ಬೆಳವಣಿಗೆಯನ್ನು ತಿಳಿಯುವಷ್ಟು ಸಂಪರ್ಕ ಸಾಧನ ಬೆಳೆದಿದೆ ನಾವು ಈ ಸತ್ಯವನ್ನು ಅಲಕ್ಷ್ಯ ಮಾಡುವಂತಿಲ್ಲ ಮಾಡಬಾರದು ಹಾಗಾಗಿ ಅಗತ್ಯವಾಗಿ ಮಾಡಬೇಕಾದ್ದು ಎಂದರೆ ಜಗತ್ತಿನ ಪ್ರತಿಯೊಂದು ವ್ಯವಸ್ಥಿತ ವಿಭಾಗದಲ್ಲೂ ಆಗುತ್ತಿರುವ ಬೆಳವಣಿಗೆಯನ್ನು ಗಮನಕ್ಕೆ

ಿಂದುಕೊಂಡು ನಮ್ಮ ಹಿರಿಯರು ಈಗಾಗಲೇ ಮಗೆ ಕೊಟ್ಟಿರುವುದರೊಡನೆ ತಾಳೆಹಾಕಿ ತೂಗಿ ೋಡಬೇಕು ಪ್ರಾಚೀನ ಗ್ರಂಥಗಳಲ್ಲಿ ನೀಡಿರು ಷ್ಟರಿಂದಲೇ ನಾವು ತೃಪ್ತರಾಗಬೇಕಿಲ್ಲ ಜೊತೆಗೇ ಂದಿನ ವೈಜ್ಞಾನಿಕ ಬೆಳವಣಿಗೆಯಷ್ಟರಿಂದಲೇ – ಂದಿನವರ ಜ್ಞಾನವನ್ನು ಅನಾದರದಿಂದ ಕಂಡು ತೃಪ್ತರಾಗುವಂತಿಲ್ಲ ಪ್ರಾಚೀನ ವೈಜ್ಞಾನಿಕ ಬೆಳ ವಣಿಗೆ ಆಧುನಿಕ ವಿಜ್ಞಾನಿಗೆ ಮತ್ತೂ ಮೇಲೇರುವ ಪರಿಜ್ಞಾನವನ್ನು ನೀಡುವುದೇ ನಿಜವಾಗಿರಬಹುದು ಣಕಯಂತ್ರದ ಭಾಷೆಯನ್ನು ಬೆಳೆಸಲು ಸಂಸ್ಕೃತ ಹಾಗೂ ಶಾಸ್ತ್ರೀಯ ಭಾಷೆಗಳ ಪರಿಚಯ ಪಡೆ ಯಲು ತಮ್ಮ ಸಮಯವನ್ನು ಬಳಸಬೇಕೆಂದು ಅಮೆರಿಕಾದ ಕಂಪ್ಯೂಟರ್ ವಿಜ್ಞಾನಿ ಡಾ|| ಬ್ರಿಗ್ಸ್ ಅವರು ಜಗತ್ತಿನ ಇತರ ಕಂಪ್ಯೂಟರ್ ವಿಜ್ಞಾನಿಗ ಗೆ ಕರೆ ನೀಡಿದ್ದನ್ನು ಇಲ್ಲಿ ನೆನೆಯಬಹುದಾಗಿದೆ ಇಲ್ಲವಾದಲ್ಲಿ ತಾವು ಸಹಸ್ರಾರು ವರ್ಷಗಳಷ್ಟು ಪ್ರಾಚೀನವಾದದ್ದನ್ನು ಹೊಸದಾಗಿ ಕಂಡುಕೊಂಡೆ ವೆಂದು ಅವರು ತಿಳಿಯಬಹುದಾದ ಸಂಭವವುಂ ಟಾಗಬಹುದು ಎಂದು ಆತ ಹೇಳುತ್ತಾರೆ

ಹೀಗಾಗಿ ಸಧ್ಯದ ಅವಶ್ಯಕತೆಯೆಂದರೆ ಸಂಸ್ಕೃ ತದ ವೈಜ್ಞಾನಿಕ ಶಾಖೆಗಳು ಹಾಗೂ ಸಮಾ ನಾಂತರವಾದ ಆಧುನಿಕ ವಿಜ್ಞಾನಗಳಿಗೂ ಮಧ್ಯ ದಲ್ಲಿನ ಸಹವಾಸ ಸಂಬಂಧಗಳನ್ನು ಬೆಳೆಸುವ ಪರಿಶೋಧನೆಗಳ ಪ್ರೋತ್ಸಾಹ ಸಂಸ್ಕೃತದಲ್ಲಿನ ಶಾಸ್ತ್ರಗಳು ಸಮಾನಾಂತರ ವಿಜ್ಞಾನಗಳೊಂದಿಗೆ ಒಳ ಸಂಬಂಧವನ್ನು ಬೆಳೆಸಿಕೊಳ್ಳುವ ಅಂತ ಸ ತ್ವವನ್ನು ಪಡೆದಿವೆ ನ್ಯಾಯ ಶಾಸ್ತ್ರವು ಆಧು ನಿಕ ಶಾಸ್ತ್ರಗಳಾದ ತರ್ಕ ತತ್ವ ಭಾಷಾ ಅಲಂ ಕಾರ ಗಣಕ ಶಾಸ್ತ್ರಗಳೊಂದಿಗೆ ಸಂಬಂಧವನ್ನು ಪಡೆಯಬಲ್ಲದು ವ್ಯಾಕರಣ ಶಾಸ್ತ್ರವು ಆಧುನಿಕ ಭಾಷಾಶಾಸ್ತ್ರ ಹಾಗೂ ಗಣಕ ವಿಜ್ಞಾನದೊಂದಿಗೂ ಮಿಾಮಾಂಸೆ ಶಾಸ್ತ್ರವು ತತ್ವಶಾಸ್ತ್ರ ಮಾನವಶಾಸ್ತ್ರ ಸಮಾಜಶಾಸ್ತ್ರ ಕಾನೂನು ಮೊದಲಾದ ವಿಜ್ಞಾನಗ ಳೊಡನೆಯೂ ಸಾಂಖ್ಯ ಯೋಗ ವೇದಾಂತಗಳು ಆಧುನಿಕ ತತ್ವಶಾಸ್ತ್ರಗಳೊಡನೆ ಸಂಬಂಧಗಳನ್ನು ಪಡೆಯ ಬಲ್ಲವು ಇವು ಕೆಲವು ಮಾತ್ರವೇ ಹೀಗೆ ಬಳಿ ಸಂಬಂಧಗಳುಂಟಾದಂತೆಲ್ಲ ಇನ್ನೂ ಅನೇಕ ಹೊಸ ಹೊಸ ವೈಜ್ಞಾನಿಕ ಕ್ಷೇತ್ರಗಳುಂಟಾ ಗುವುವು ಎಂಬುದಲ್ಲಿ ಸಂದೇಹವಿಲ್ಲ



# ಋಗ್ವೇದ ಮಹತ್ವ

ಡಾ|| ಎಸ್ ಜಿ ಕಾಂಟಾವಾಲಾ ಬರೋಡಾ

ಇಂಡೋಯುರೋಪಿಯನ್ ಭಾಷೆಗಳಲ್ಲಿ ಪ್ರಾಚೀನತಮ ಸಾಹಿತ್ಯವನ್ನು ಭಾರತದಲ್ಲಿ ಸಂರಕ್ಷಿಸಲಾಗಿದೆ ಮತ್ತು ಭಾರತದ ಪ್ರಾಚೀನತಮ ಸಾಹಿತ್ಯ ಋಗ್ವೇದ ಇದು ವೇದಗಳಲ್ಲಿ ಮೊದಲನೆಯದಾಗಿದ್ದು ಓಐಎ ಸಾಹಿತ್ಯದಲ್ಲಿ ಪ್ರಾಚೀನತಮ ವಾಗಿ ಇದರ ಮಹತ್ವ ಹಲವಾರು ದಿಸೆಗಳಲ್ಲಿ ಹರಡಿದೆ ವೈದಿಕ ಭಾಷೆಯು ಇಂಡೋ ಯುರೋಪಿಯನ್ ಭಾಷೆಗಳಿಗೆ ಹತ್ತಿರದ ಸಂಬಂಧ ಹೊಂದಿದ್ದು ಅವೆ ಸ್ಥನ್ ಪ್ರಾಚೀನ ಪರ್ಶಿಯನ್ ಮೊದಲಾದ ಶತಂ ಭಾಷೆಗಳಿಗೂ ಕೆಂಟಂ ಭಾಷೆ ಗಳಾದ ಗ್ರೀಕ್ ಲ್ಯಾಟಿನ್ ಭಾಷೆಗಳಿಗೂ ಸಾದೃಶ್ಯಗಳನ್ನು ಹೊಂದಿದೆ ಸಂಸ್ಕೃತ ಭಾಷೆಯ ಪರಿಶೋಧನೆಯಿಂದಾಗಿ ತೌಲನಿಕ ಭಾಷಾ ಶಾಸ್ತ್ರದ ಕ್ಷೇತ್ರದಲ್ಲಿ ಋಗ್ವೇ ದೀಯ ಭಾಷೆ ಬಹುಮುಖ್ಯಸ್ಥಾನ ಪಡೆದಿತು ದ್ರವಿಡ ಕುಟುಂಬದ ಭಾಷೆಗಳನ್ನುಳಿದು ಮಿಕ್ಕ ಭಾಷೆಗಳು ತಮ್ಮ ಮೂಲದಲ್ಲಿ ಸಂಸ್ಕೃತ ಭಾಷೆಯನ್ನು ಆಧರಿಸಿರುವುದರಿಂದ ಋಗ್ವೇದೀಯ ಭಾಷೆಯು ಓಐಎ ಎಂಐಎ ಹಾಗೂ ಎನ್ಐಎ ಭಾಷೆಗಳ ಚಾರಿತ್ರಿಕ ತುಲನಾತ್ಮಕ ಅಧ್ಯಯನ ಕ್ಷೇತ್ರಗಳಲ್ಲಿ ಋಗ್ವೇದೀಯ ಭಾಷೆ ಪ್ರಮುಖ ಆಗುತ್ತದೆ ಮಲೆಯಾಳಂದಂತಹ ದಕ್ಷಿಣ ಭಾರತದ ಭಾಷೆಗಳಲ್ಲಿ ಸಂಸ್ಕೃತ ಪದಸಂ ಪತ್ತು ನಿಕ್ಷಿಪ್ತವಾಗಿದೆಯೆಂಬುದನ್ನೂ ಗಮನಿಸಬಹುದು ಮುಂಡ್ ಮತ್ತಿತರ ಭಾಷೆಗ ಳೊಡನೆ ಋಗ್ವೇದೀಯ ಭಾಷೆಯ ಸಾಮಿಾಪ್ಯವನ್ನೂ ಗಮನಿಸಬೇಕು

ಋಗ್ವೇದವು ತೌಲನಿಕ ಪುರಾಣ, ಧರ್ಮ ಸಾಹಿತ್ಯಗಳ ಅಧ್ಯಯನಕ್ಕೆ ಮಹತ್ವ ಪೂರ್ಣ ಪಂತಿಗೆ ನೀಡುತ್ತದೆ ಹಲವಾರು ಜನಪ್ರಿಯ ಧರ್ಮಗಳನ್ನು ಒಳಗೊಂಡಂತೆ ಭಾರತದ ಅನೇಕ ಧಾರ್ಮಿಕ ಪಂಥಗಳ ಅಧ್ಯಯನದಲ್ಲಿಯೂ ಮುಖ್ಯವಾಗುತ್ತದೆ

ಪ್ರಾಚೀನ ಸಮಾಜ ಹಾಗೂ ಪ್ರಾಚೀನ ಸಾಮಾಜಿಕ ವ್ಯವಸ್ಥೆಗಳ ಅಧ್ಯಯನ ದಲ್ಲಿ ಋಗ್ವೇದ ಮೊತ್ತ ಮೊದಲ ದಾಖಲೆಯಾಗಿದೆ ಧರ್ಮಶಾಸ್ತ್ರದ ಪರಿಕಲ್ಪನೆಗಳ ಬಗ್ಗೆಯೂ ಆರ್ಥಿಕವಾದ ಕೆಲವು ಚಿಂತನೆಗಳ ಬಗ್ಗೆಯೂ ಹಲವಾರು ಹೊಳಹುಗ ಳನ್ನು ನೀಡುತ್ತದೆ

ಋಗ್ವೇದವು ಭಾರತೀಯ ತತ್ವಶಾಸ್ತ್ರದ ಶಾಖೆಯಲ್ಲಿ ಪ್ರತ್ಯೇಕವಾಗಿ ವೇದಾಂತ ಸಾಂಖ್ಯ ತತ್ವಗಳಲ್ಲಿ ಬೆಳಕು ಬೀರುತ್ತದೆ

ಋಗ್ವೇದದಲ್ಲಿನ ಮಂತ್ರಗಳು ಸಂಸ್ಕಾರಗಳು ಕಥೆಗಳಲ್ಲಿ ನಂತರದ ಧಾರ್ಮಿಕ, ಪುರಾಣಿಕ ಸಾಹಿತ್ಯರೂಪಗಳ ಬೀಜವನ್ನು ಗುರುತಿಸಬಹುದು ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಇಲ್ಲಿನ ಪೌರಾಣಿಕ ವಿವರಣೆಗಳು ಅಂದಿನ ಭೂಗೋಳ ಶಾಸ್ತ್ರ ವಿವರವನ್ನು ನೀಡುತ್ತವೆ ಹಾಗೂ ಪ್ರಾಚೀನ ಯುದ್ಧ ಕೌಶಲದ ತಂತ್ರ ಕಲಾವಿವರಗಳನ್ನು ನೀಡಿ, ಸಂಖ್ಯಾ ವಿವರಗಳನ್ನೂ ನೀಡುತ್ತವೆ

ಹೀಗೆ ಋಗ್ವೇದವು ಸಾಂಸ್ಕೃತಿಕ ರಾಜಕೀಯ ಇತಿಹಾಸ ಧರ್ಮ ಪುರಾಣ ತತ್ವ ಶಾಸ್ತ್ರದ, ಹಲವಾರು ವೈಜ್ಞಾನಿಕ ಚಿಂತನೆಗಳ ಭಾಷೆಯ ಸಾಹಿತ್ಯದ ಅಧ್ಯ ಯನದಲ್ಲಿ ಮಹತ್ವದ ಪಾತ್ರ ವಹಿಸಿದೆ



# ತಿ ತಿ ದೇವಸ್ಥಾನಗಳು, ತಿರುಪತಿ
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ

ಶ್ರೀನಿವಾಸನ ಹಾಡುಗಳು ಭಾಗ ೨ (ಶ್ರೀಪಾದರಾಜರು
ವ್ಯಾಸರಾಯರು ವಾದಿರಾಜರು, ಕನಕದಾಸರು) ೪ ೫೦
ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ)
ವಿ ಬಾದರಾಯಣ ಮೂರ್ತಿ ೧೨ ೫೦
ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ)
ಬನ್ನಂಜೆ ಗೋವಿಂದಾಚಾರ್ಯ ೭ ೦೦
ಕೇಶವಾದಿ ರೂಪಗಳು (ಕನ್ನಡ ತೆಲುಗು ಆಂಗ್ಲ
ಹಿಂದಿ ಚಿತ್ರವಿವರಣೆ) ಸಂ ಕೆ ಅಪ್ಪಣ್ಣಾಚಾರ್ಯ ೩ ೭೫
ಕರ್ನಾಟಕ ಹರಿದಾಸರು (ಕನ್ನಡ ತೆಲುಗು ಆಂಗ್ಲ
ಹಿಂದಿ ಚಿತ್ರವಿವರಣೆ) ಸಂ ಕೆ ಅಪ್ಪಣ್ಣಾಚಾರ್ಯ ೨ ೨೫
ಸ್ತೋತ್ರ ಕುಸುಮಮಾಲಾ ಸಂ ವೆಂಕಟಾಚಲ ೩ ೦೦
ಆಚಾರಗಳು ಆಡಂಬರಗಳು ಕೆ ಚಂದ್ರಮೌಳಿ ೦ ೪೦
ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೦ ೫೦
" (ಕನ್ನಡ ಲಿಪಿಯಲ್ಲಿ) ೦ ೧೨

### ಮಕ್ಕಳಿಗಾಗಿ

ಶ್ರೀಪಾದರಾಜರು ಎಂ ಎಸ್ ಗುಂಡೂರಾವ್ ೦ ೭೫
ಮಹಿಪತಿದಾಸರು ಶಾನಭಾಗ ೦ ೮೫
ಪ್ರಸನ್ನ ವೆಂಕಟದಾಸರು ವಿ ಬಾದರಾಯಣಮೂರ್ತಿ ೦ ೮೦
ಗೋಪಾಲದಾಸರು ರುಕ್ಮಿಣಿಗಿರಿಮಾಜಿ ೦ ೭೫

### ಹಿಂದಿ

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ
ಡಾ ಎಂ ಸಂಗಮೇಶಂ ೦ ೨೦
ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) ೧೧ ೦೦
ತೀರ್ಥರಾಜ ತಿರುಪತಿ ಡಾ ಎಂ ಸಂಗಮೇಶಂ ೧ ೫೦

### ಸಂಸ್ಕೃತ

ಶ್ರೀ ವೇಂಕಟೇಶ್ವರ ಸುಪ್ರಭಾತಂ ೦ ೧೨
ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ ೦ ೬೨
ಕಠೋಪನಿಷತ್ ಡಾ ಕೆ ಸಿ ವರದಾಚಾರಿ ಹಾಗೂ
ಡಾ ಡಿ ತಾತಾಚಾರ್ಯ ೧೫ ೦೦
ಮಾರ್ಕಂಡೇಯ ಸಂಹಿತಾ ೧೮ ೦೦
ತತ್ತ್ವಸಂಖ್ಯಾನಂ ಆರ್ ರಾಮಮೂರ್ತಿ ಶರ್ಮಾ ೨ ೦೦
ಬ್ರಹ್ಮಸೂತ್ರ ಭಾಷ್ಯ (ಭಾಗ ೧)
ಆರ್ ರಾಮಮೂರ್ತಿ ಶರ್ಮಾ ೩೦ ೦೦
ಅಲಂಕಾರ ಸಂಗ್ರಹ ಸಂ ಕೆ ಭಾಸ್ಕರರಾವ್ ೧೬ ೦೦
ಸೀತಾರಾಮಾಂಜನೇಯಂ
ಡಾ ಡಿ ಅರ್ಕಸೋಮಯಾಜಿ ೫೦ ೦೦
ಪ್ರಶ್ನೋಪನಿಷತ್ ೧೧ ೦೦
ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರ
ಸಂ ಡಾ ಎಸ್ ಬಿ ರಘುನಾಥಾಚಾರ್ಯ ೨೫ ೦೦

೧೦೦೦ ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ ೩೦ಶತಾಂಶ ರಿಯಾಯಿತಿಯೂ, ೫೦೦ ರೂಗಳಿಂದ ೧೦೦೦ ರೂ ವರೆಗೆ ೨೫ಶತಾಂಶ/ ರಿಯಾಯಿತಿಯೂ ೧೦೦ ರೂಗಳಿಂದ ೫೦೦ ರೂ ವರೆಗೆ ೧೫ಶತಾಂಶ ರಿಯಾಯಿತಿಯೂ ಉಂಟು

ಅಂಚೆವೆಚ್ಚ ಪ್ರತ್ಯೇಕ

ಕೂಡಲೇ ಬರೆಯಿರಿ

**ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,**
**ತಿ ತಿ ದೇ ತಿರುಪತಿ**

# ವೇದ ಸಂದೇಶ

ಶ್ರೀ ಅಗ್ನಿಹೋತ್ರಂ ರಾಮಾನುಜ ತಾತಾಚಾರ್ಯ, ಮದ್ರಾಸ್

ಮಹತ್ವವಾದ ಹಳಮೆಯನ್ನು ಹೊಂದಿದ ್ಮ ನಾಡಿನ ಪವಿತ್ರ ಗ್ರಂಥಗಳು ಋಕ್ ಜುರ್ ಸಾಮ ಅಥರ್ವ ವೆಂಬ ನಾಲ್ಕು ವೇದ ) ಇವು ಸಂಸ್ಕೃತಿ, ತತ್ವಶಾಸ್ತ್ರ ಧರ್ಮಗಳ ಆಳವಾದ ಚಿಂತನೆಗಳನ್ನು ಹೊಂದಿರುವವು ಾಗಿರುವುದರಿಂದಲೂ ಅಪೌರುಷೇಯ ಆದ ಂದಲೂ ನಮಗೆ ಮಾನವಾತೀತ ಮೌಲ್ಯದ ಥಗಳಾಗಿವೆ ಕಾಡು ಮೇಡುಗಳಲ್ಲಿ ಅಲೆ ುತ್ತ ಗುಹೆಗಳಲ್ಲಿ ವಾಸಿಸುತ್ತ ನದೀದಡಗಳಲ್ಲಿ ುಗುತ್ತ ತಮ್ಮ ಇಡೀ ಚಿಂತನ ಶಕ್ತಿಯನ್ನು ವ್ರವಾಗಿ ತೊಡಗಿಸಿಕೊಂಡು ವೈದಿಕ ಋಷಿಗಳು ಾಗಿದ್ದ ಆಳವಾದ ಅವಗಾಹನೆಯಿಂದ ಪರಮ ವನ್ನು ದರ್ಶಿಸಿದರು (ಉಪಹ್ವರೇ ಗಿರೀಣಾಂ ಗಮೇ ಚ ನದೀನಾಂ ಧಿಯಾ ವಿಪ್ರೋ ಅಜಾ ತ – ಋಗ್ವೇದ) ಕಾವ್ಯಾತ್ಮಕ ಹಿನ್ನೆಲೆಯಲ್ಲಿ ವ ದೈವಸ್ತುತಿ ಪ್ರಾರ್ಥನೆಗಳ ರೂಪದಲ್ಲಿರುವ ಂತ್ರಗಳ ಮೂಲಕ ತಮ್ಮ ಚಿಂತನೆಯನ್ನು ಅಭಿ ಸಿದರು ವೇದಗಳು 20 000 ಕ್ಕೂ ಹೆಚ್ಚಿನ ಂತ್ರಗಳನ್ನೂ ಸಾವಿರಾರು ಗದ್ಯ ವಾಕ್ಯಗಳನ್ನೂ ಂದಿವೆ ದೇವರ ಬಗ್ಗೆಯೂ ಮಾನವ – ವನಕ್ಕಾಗಿ ದೈವವನ್ನು ಅವಲಂಬಿಸಬೇಕಾಗುವು ನ್ನೂ ತಿಳಿಸುವುದರಲ್ಲಿ ಇತರ ಧಾರ್ಮಿಕ ಗ್ರಂಥ ' ಮಾರ್ಗವನ್ನೇ ಇವೂ ಹಿಡಿದಿವೆ ಆದರೆ ೇ ಹೊತ್ತಿನಲ್ಲಿಯೇ ದೈವವನ್ನು ಆದಿಭೌ ಹಿನ್ನೆಲೆಯಲ್ಲಿ ಚಿತ್ರಿಸಲಾಗಿದೆ ವೇದಗಳು ುಗೆ ನೀಡಿರುವ ತಾತ್ವಿಕ ಚಿಂತನೆಗಳಿಂದಾಗಿ ದಗಳ ಪರಮ ಪುರುಷನನ್ನು ಅರಿಯ ಬಹು ಾಗಿದೆ ವೇದಗಳ ದೇವರು ಮನುಷ್ಯನ ಸಾಧ ಯಿಂದ ಸಂತುಷ್ಟನಾಗಿ ಇಹಪರ ಸೌಖ್ಯವನ್ನು ಡುತ್ತಾನೆ ವೇದಗಳ ಈ ದೇವರು ಅಜ್ಞೇ ಾನೆಂದು ವಿವರಿಸಲ್ಪಟ್ಟಿದ್ದರೂ ಮನುಷ್ಯ ತದ್ಭಾ ನೆಯ ದೃಷ್ಟಾ ಮನುಷ್ಯ ಚಿಂತನೆಗೆ ಹತ್ತಿರ ಾಗಿ ಇಂದ್ರಿಯ ಗ್ರಾಹ್ಯತೆಗೂ ಅತೀಂದ್ರಿಯಕ್ಕೂ ಗತ್ತಿನೊಂದಿಗೆ ಇರುವ ಸಂಬಂಧವನ್ನು ವಿವರಿ ವುದು ಇದೊಂದು ವಿಶಿಷ್ಟವಾದ ಧರ್ಮಗ್ರಂ ವಾಗಿ ನಮ್ಮ ಮುಂದೆ ನಿಲ್ಲುತ್ತದೆ ವೇದಗಳ ಶೇಷವನ್ನು ಪಾಶ್ಚಾತ್ಯರೂ ಕಂಡುಕೊಂಡಿದ್ದಾರೆ ದಗಳ ಪ್ರಖ್ಯಾತ ವಿದ್ವಾಂಸ ಮ್ಯಾಕ್ಸ್ ಮುಲ್ಲರ್ ವಿವೇಕಾನಂದರಿಂದ ವೇದಗಳ ಅವರಾವತಾರ ಂದು ಹೊಗಳಲ್ಪಟ್ಟ– ಹೇಳುವ ಮಾತು "ಜಗತ್ತಿನ ಧಾರ್ಮಿಕ ಕೃತಿಗಳು ತುಂಬಲಾ ದ ಕೊರತೆಯನ್ನು ವೇದಗಳು ತುಂಬಿಕೊಡು ತ್ತವೆ" ವೇದಗಳ ವೈಶಿಷ್ಟ್ಯ ಬಹುಮುಖವಾಗಿ ಪ್ರಕಟವಾಗಿವೆ ಅವು ಒಂದು ನಿರ್ದಿಷ್ಟ ಕಾಲಮಾನದ ಗ್ರಂಥಗಳೇ ಆದರೂ ಶಾಶ್ವತ ಮೌಲ್ಯಗಳ ಭಾವವನ್ನು ಒಳಗೊಂಡಿವೆ ಇದರಿಂದಾಗಿಯೇ ಮನು ಹೇಳುತ್ತಾನೆ– "ಅವು ಪಿತೃಗಳು, ದೇವತೆಗಳು ಮನುಷ್ಯರ ನಯನಗಳಾಗಿ ಶಾಶ್ವತ ಮೌಲ್ಯ ಪಡೆದದ್ದು" (ಪಿತೃ ದೇವ ಮನುಷ್ಯಾಣಾಂ ವೇದ ಚಕ್ಷು ಸನಾತನಮ್) ಮುಂದುವರೆದು ಅವು ಪ್ರಮಾಣಭೂತವೂ ನಾಶವಾಗದವೂ ಅಮೂಲ್ಯವೂ ಆದವು (ಅಶಕ್ಯಂ ಚ ಅಪ್ರಮೇಯಂ ಚ ವೇದಶಾಸ್ತ್ರಂ ಇತಿಸ್ಥಿತಿ)" ಎನ್ನುತ್ತಾನೆ ಅವೈದಿಕ ಕೃತಿಗಳೊಡನೆ ಹೋಲಿಸುತ್ತ ಹೇಳುತ್ತಾನೆ – ಇತರ ಭಾವಗಳು ಬರಬಹುದು ಹೋಗಬಹುದು ಆದರೆ ವೈದಿಕ ಚಿಂತನೆಗಳು ಶಾಶ್ವತವಾಗಿರುತ್ತವೆ ಕಾರಣ ಇತರ ಭಾವಗಳು ಐತಿಹಾಸಿಕವಾದವು ಐತಿಹಾಸಿಕ ಮೌಲ್ಯದ ಭಾವನೆಗಳು ಯಾವುವೂ ವೇದಗಳಂತೆ ಶಾಶ್ವತವಾಗಿ ನಿಲ್ಲುವುದಿಲ್ಲ (ಉತ್ಪದ್ಯಂತೇ ಸ್ಯವಂತೇ ಚ ಯಾನಿ ಅತೋಽನ್ಯಾನಿ ಕರ್ಹಿಚಿತ್ ತಾನಿ ಅವಾರ್ಕ್ ಆಲೇತೇತಾಯ ನಿಷ್ಫಲಾನಿ ಅನ್ಯತಾನಿ ಚ) ವೇದಗಳ ಕಾಲದನಂತರ ಬಂದ ಗ್ರಂಥಗಳು ವೇದಗಳ ಹಿರಿಮೆಯನ್ನು ಮುಕ್ತವಾಗಿ ಕೀರ್ತಿಸಿವೆ ಅವೆಲ್ಲವೂ ತಾವು ವೇದಗಳಿಂದ ಸ್ಫೂರ್ತಿ ಪಡೆದಿವೆಯೆಂದು ಒಪ್ಪಿವೆ ಆಳ್ವಾರರು ನಾಯನ್ಮಾರರು, ಮೊದಲಾದ ತಮಿಳುನಾಡಿನ ಭಕ್ತರು ಆಂಧ್ರದ ಭಕ್ತರು ಕರ್ನಾಟಕ ಮತ್ತಿತರ ಭಾಗಗಳ ಭಕ್ತ ಸಂತರೆಲ್ಲರೂ ಅವರು ಯಾವ ಪ್ರಾಂತದವರಾದರೂ ಭಾಷೆಯವರಾದರೂ, ವೇದಗಳ ಭಾವನೆಗಳಿಂದ ತಮಗೆ ಪ್ರಯೋಜನವಾಗಿದೆಯೆಂದು ಭಾವಿಸಿದ್ದಾರೆ ಈಚಿನ ಮಹಾಕವಿ ಸುಬ್ರಹ್ಮಣ್ಯ ಭಾರತಿ ಭಾರತದ ಹಿರಿಮೆ ಮಹತ್ವಗಳು ವೇದಗಳ ಆಧಾರದಿಂದ ಮಾತ್ರವೇ ಎಂದು ಸಾರಿಹೇಳಿದ್ದಾನೆ (ವೇದಂ ಎನ್ರುಂ ವಾಳ್ಗ ಎನ್ರು ಕೊಟ್ಟು ಮುರಸೇ) ಭರತವರ್ಷದ ಕೀರ್ತಿ ವೇದಗಳ ಕೀರ್ತಿಯಿಂದ ಮಾತ್ರವೇ ಉಂಟಾದದ್ದು ವೈದಿಕ ಅಧ್ಯಯನವನ್ನು ಪ್ರೋತ್ಸಾಹಿಸುವ ಅನೇಕ ಸಂಸ್ಥೆಗಳಿಂದಾಗಿ ಇಡೀ ಇಂಡಿಯಾದಲ್ಲೆಲ್ಲ ವೈದಿಕ ಅಧ್ಯಯನ ಹರಡಿದೆ ವೇದಪಾಠಶಾಲೆಗಳನ್ನೂ ವೇದ ವಿಜ್ಞಾನ ಸಭೆ ಸಮಾರಂಭಗಳನ್ನು ತಿ ತಿ ದೇ ಪ್ರೋತ್ಸಾಹಿಸುತ್ತಿದೆ ಆಂಧ್ರಪ್ರದೇಶದಲ್ಲಿ ಮಾತ್ರವಲ್ಲದೆ ಇತರೆಡೆಗಳಲ್ಲೂ ವೇದ ಪಂಡಿತರನ್ನು ಪ್ರೋತ್ಸಾಹಿಸಲು ವಿವಿಧ ದೇವಾಲಯಗಳಲ್ಲಿ ವೇದ ಪಠಣಕ್ಕಾಗಿ ವೇದ ಪಂಡಿತರ ಏರ್ಪಾಡು ಮಾಡಲಾಗಿದೆ ಇಡೀ ಭಾರತದಲಿ ಹರಡಿ ಹೋಗಿರುವ ವಿವಿಧ ಶಾಖೆಗಳ ವೇದಪಠಣದ ಧ್ವನಿಸುರುಳಿಗಳನ್ನು ಸಿದ್ಧಗೊಳಿಸುತ್ತಿದ್ದಾರೆ ಈ ವರೆಗೆ 1000 ಗಂಟೆಗಳ ಕಾಲದ ವೇದ ಪಠಣವನ್ನು ಧ್ವನಿಸುರುಳಿಗಳ ರೂಪದಲ್ಲಿ ಸಿದ್ಧಗೊಳಿಸಲಾಗಿದೆ ಇದರಿಂದಾಗಿ ತಿ ತಿ ದೇ ಗಳಲ್ಲಿ ಒಂದು ಬೃಹತ್ ವೇದಧ್ವನಿ ಭಂಡಾರವನ್ನು ನಿರ್ಮಿಸುವುದು ಅವರ ಗುರಿ ವೈದಿಕಾಧ್ಯಯನದ ಕೇಂದ್ರಬಿಂದು ತಿರುಪತಿ ಆಗಿದೆ ವೇದಗಳನ್ನು ರಕ್ಷಿಸಿದಂತೆಯೇ ವೇದ ಭಾಷ್ಯಗಳ ಅಧ್ಯಯನವನ್ನು ಅವರು ಪರೀಕ್ಷೆಗಳಲ್ಲಿ ಸಂಭಾವನೆ ನೀಡುವುದರ ಮೂಲಕ ಪ್ರೋತ್ಸಾಹಿಸುತ್ತಿದ್ದಾರೆ

ವೇದಗಳಲ್ಲಿ ವೈದಿಕ ಭಾವನೆಗಳನ್ನು ವೈಶಿಷ್ಟ್ಯಪೂರ್ಣರೀತಿಯಲ್ಲಿ ಅಭಿವ್ಯಕ್ತಗೊಳಿಸಲಾಗಿದೆ ಇಲ್ಲಿ ಸಂಸ್ಕೃತದ ಆಡು ಭಾಷೆಯನ್ನೂ ಪ್ರೌಢಭಾಷೆಯನ್ನೂ ನಾವು ಒಟ್ಟಿಗೆ ನೋಡಬಹುದು ಇತರ ಭಾಷೆಗಳೊಂದಿಗೆ ಸಂಬಂಧವನ್ನೂ ಕಾಣಬಹುದು ಎಲ್ಲ ಯೂರೋಪಿಯನ್ ಭಾಷೆಗಳೊಂದಿಗೂ ಇರುವ ಸಂಸ್ಕೃತದ ಸಂಬಂಧವನ್ನು ಭಾಷಾಶಾಸ್ತ್ರದ ಅಧ್ಯಯನದಿಂದ ತಿಳಿಯಬಹುದು ವೇದ ಶಬ್ದಕೋಶವನ್ನು ತಯಾರಿಸಿದ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ದಿ|| ಪ್ರೊ|| ಬರ್ರೋ ಅವರ ಅಭಿಪ್ರಾಯದಂತೆ ದ್ರಾವಿಡ ಭಾಷಾಪದಗಳೂ ವೇದಗಳಲ್ಲಿ ಸ್ಥಾನಗಳಿಸಿವೆ ಪ್ರಪಂಚದ ಇತಿಹಾಸದಲ್ಲಿ ಜನಾಂಗ ಮತ್ತು ಭಾಷೆಗಳ ಹುಟ್ಟು ಬೆಳವಣಿಗೆಗಳನ್ನು ತಿಳಿಯಲು ವೈದಿಕ ಭಾವನೆಗಳನ್ನು ತಿಳಿಯಲು ಪಾಶ್ಚಾತ್ಯರು ಬಹಳಷ್ಟು ವೈದಿಕ ಪರಿಶೋಧನೆಗಳನ್ನು ಮಾಡಿದ್ದಾರೆ ಎರಡು ಶತಮಾನಗಳ ಕಾಲ ವೇದಗಳನ್ನು ತಿಳಿಯುವ ಪ್ರಯತ್ನ ಮಾಡುತ್ತ ವೇದಗಳ ಬಗ್ಗೆ ತಮ್ಮ ವಿಶ್ವವಿದ್ಯಾಲಯಗಳ, ಉಪನ್ಯಾಸಗಳ ಮೂಲಕ ಬಹಳ ಕೃತಿಗಳನ್ನು ರಚಿಸಿದರು ಭಾರತದಲ್ಲಿ ವೇದಾಧ್ಯ

ಯನ ಇಳಿಮುಖವಾಗಿದ್ದರೂ ಪಾಶ್ಚಾತ್ಯ ದೇಶಗಳಲ್ಲಿ ಮೇಲ್ಮೆ ಪಡೆದಿದೆ ಅವರ ವೇದಾಧ್ಯಯನದ ಆಸಕ್ತಿ ಭಾಷಾಶಾಸ್ತ್ರ, ಸಂಸ್ಕೃತಿ ಮೌಲ್ಯಗಳ ದೃಷ್ಟಿಕೋನದ್ದು ನಮ್ಮ ದೇಶದಲ್ಲೂ ಈಚೆಗೆ ವೇದಗಳನ್ನು ಆಧುನಿಕ ಮಾರ್ಗಗಳಲ್ಲಿ ಅಧ್ಯಯನ ಮಾಡಲು ನೆರವು ಮುಂದೆ ಬರುತ್ತಿದೆ

ಆದರೆ ಸಮಕಾಲೀನ ಧಾರ್ಮಿಕ ವಿಷಯಗಳಲ್ಲಿ ವೇದಗಳು ದೂರ ನಿಲ್ಲುತ್ತವೆಯೆಂಬುದು ದುರದೃಷ್ಟ ತರ್ಕ ವ್ಯಾಕರಣ ಮೊದಲಾದ ಇತರ ಶಾಸ್ತ್ರಗಳ ಅಧ್ಯಯನವೇ ವೈದಿಕ ಅಧ್ಯಯನದಲ್ಲಿ ಮೇಲುಗೈ ಪಡೆದಿವೆ ಇದರಿಂದ ಸಂಸ್ಕೃತದ ಬುದ್ಧಿಜೀವಿಗಳು ವೇದಗಳ ಅಧ್ಯಯನವಿಲ್ಲದೆಯೇ ತಮ್ಮ ಶಿಕ್ಷಣವನ್ನು ನಿಲ್ಲಿಸುತ್ತಿದ್ದಾರೆ ಸಂಸ್ಕೃತ ಭಾಷೆಯ ಅಭ್ಯಾಸ ವೇದಗಳ ಅಧ್ಯಯನ ವಿಲ್ಲದೆಯೇ ನಡೆಯುತ್ತಿದೆ ಏನೇ ಆದರೂ ಯಾರೂ ಅಲ್ಲಗಳೆಯದಂತೆ ವೇದಗಳ ಪ್ರಾಧಾನ್ಯ ಅಂಗೀಕೃತವಾಗಿದೆ

ಬಹುಕಡಮೆ ಸಂಖ್ಯೆಯ ಜನ ಅನುಸರಿಸುತ್ತಿರುವ ವೈದಿಕ ಯಜ್ಞ ಧರ್ಮವನ್ನು ವೇದಗಳು ಬೋಧಿಸುತ್ತವೆ ವೈದಿಕ ಯಜ್ಞಗಳನ್ನು ಆಚರಿಸುತ್ತ ವೈದಿಕ ಪರಂಪರೆಯನ್ನು ಆಂಧ್ರದೇಶ ಕಾಪಾಡುತ್ತಿದೆ ವೈದಿಕ ಭಾವನೆಗಳನ್ನು ಪ್ರಚಾರ ಪ್ರಸಾರ ಮಾಡುವುದರ ಮೂಲಕ ವೈದಿಕ ಪರಂಪರೆಯನ್ನುಳಿಸಿಕೊಂಡು ವೇದಗಳಿಗೆ ಜೀವದ್ರವ್ಯವನ್ನು ನೀಡುತ್ತಿದ್ದಾರೆ

ಋಕ್ ಯಜುರ್ ಸಾಮ ಅಥರ್ವ-ವೇದಗಳು ವೈದಿಕಪದ್ಧತಿಗಳಲ್ಲಿನ ಅನುಷ್ಠಾನಗಳಿಗೆ ಪ್ರಯೋಜನಕ್ಕೆ ಬರುವ ಮಂತ್ರಗಳನ್ನೂ ಬ್ರಾಹ್ಮಣಗಳನ್ನೂ ನೀಡುತ್ತವೆ ಹೋತಾರನ ಪ್ರಕ್ರಿಯೆಗಳಿಗೆ ಸಂಬಂಧಿಸಿದ ಮಂತ್ರಗಳು ಋಗ್ವೇದದಲ್ಲೂ ಯಜುರ್ವೇದದಲ್ಲಿ ಅಧ್ವರ್ಯುವಿನ ಕಾರ್ಯ ಕರ್ತವ್ಯ ವಿವರದ ಮಂತ್ರ ಬ್ರಾಹ್ಮಣಗಳೂ ಉದ್ಗಾತೃವಿನ ಮಂತ್ರ ಬ್ರಾಹ್ಮಣಗಳು ಸಾಮವೇದದಲ್ಲೂ ಅಥರ್ವವೇದದಲ್ಲಿ ಬ್ರಹ ನ ಮಂತ್ರ ಬ್ರಾಹ್ಮಣಗಳೂ ಉಂಟು ಇವುಗಳ ರಕ್ಷಣೆಯ ದೃಷ್ಟಿಯಿಂದಾಗಿ ಸೀಮಿತವಾದ ಕೆಲವೇ ಮಂದಿ ಇವುಗಳ ಅಧ್ಯಯನ ನಡೆಸುತ್ತಾರೆ ಋಗ್ವೇದಿಯು ಋಗ್ವೇದವನ್ನೂ ಯಜುರ್ವೇದಿಯು ಯಜುರ್ವೇದವನ್ನೂ ಸಾಮವೇದಿಯು ಸಾಮವೇದವನ್ನೂ ಅಥರ್ವವೇದಿಯು ಅಥರ್ವಣವೇದವನ್ನೂ ಅಭ್ಯಾಸಮಾಡುವರು ಸಾಮಾನ್ಯ ದೃಷ್ಟಿಯಿಂದ ಋಗ್ವೇದವು ದೈವದ ಸ್ತುತಿ ಪ್ರಾರ್ಥನೆಗಳ ಮಂತ್ರಗಳನ್ನು ಒಳಗೊಂಡಿದೆ ಸಾಮವೇದವು ಋಗ್ವೇದ ಮಂತ್ರಗಳನ್ನು ಗೀತಾತ್ಮಕ ಅಭಿವ್ಯಕ್ತಿಗೈಯುತ್ತದೆ ಯಜುರ್ವೇದ ಮಂತ್ರಗಳು ವೈದಿಕ ಯಜ್ಞ ಯಾಗಾದಿಗಳ ಮಂತ್ರಗಳನ್ನು ಒಳಗೊಂಡಿದ್ದು ಈ ಮಂತ್ರಗಳ ನೆರವಿನಿಂದ ಮಾತ್ರವೇ ಯಜ್ಞಯಾಗಾದಿಗಳು ಪೂರ್ಣಗೊಳ್ಳಬಲ್ಲವು ಅಥರ್ವಣವೇದವು ಮನುಷ್ಯನ ಇಲ್ಲಿನ ಬದುಕಿಗೆ ಬೇಕಾದ ಮಂತ್ರಗಳನ್ನು ಒಳಗೊಂಡಿವೆ ನಿರೋಗವಾದ ಬೆಳವಣಿಗೆಯನ್ನು ಇಲ್ಲಿ ಹೇಳಲಾಗಿದೆ ದೀರ್ಘ ಜೀವನಕ್ಕಾಗಿ ಆಯುರ್ವೇದ ಸೂತ್ರಗಳನ್ನು ವಿವರಿಸಲಾಗಿದೆ ಋಕ್, ಸಾಮಾಥರ್ವಣಗಳು ಛಂದೋಬದ್ಧವಾಗಿವೆ ಯಜುರ್ವೇದವು ಯಜ್ಞಗಳ ಅನುಷ್ಠಾನದ ಬಗ್ಗೆ ಸಣ್ಣ ಸಣ್ಣ ಗದ್ಯ ವಾಕ್ಯಗಳನ್ನು ಒಳಗೊಂಡಿದೆ ತಿರುಪತಿಯಲ್ಲಿ ತಮ್ಮ ವೇದ ಪಾರಾಯಣ ಪದ್ಧತಿಯಲ್ಲಿ ಅಥರ್ವಣ ವೇದವನ್ನೂ ಸೇರಿಸಿಕೊಂಡು ಅಥರ್ವವೇದವನ್ನು ಉಳಿಸಿಕೊಂಡಿರುವುದು ಹೆಮ್ಮೆಯ ವಿಷಯವೇ ಆಗಿದೆ ವೇದಗಳನ್ನು ವೈದಿಕರು ಬೇರೆ ಬೇರೆ ಶಾಖೆಗಳಲ್ಲಿ ಅಭ್ಯಾಸ ಮಾಡಿದ್ದರೂ ಎಲ್ಲ ವೇದಗಳು ಒಂದೇ ಕಾರಣ ವೈದಿಕ ಧರ್ಮ ಎಲ್ಲ ವೇದಗಳ ಆಧಾರದಲ್ಲಿ ನಿಂತದ್ದಾಗಿದೆ ಗೃಹ್ಯಸೂತ್ರಗಳಲ್ಲಿ ಮಾತ್ರವೇ ಮಂತ್ರ ಹಾಗೂ ಆಚಾರಗಳಲ್ಲಿ ವ್ಯತ್ಯಾಸವನ್ನು ಕಾಣುತ್ತೇವೆ


*Statement about ownership and other particulars about*

**SAPTHAGIRI**

**(MONTHLY)**

FORM IV

*(See Rule 8)*

| | | |
|---|---|---|
| 1 | Place of Publication | TIRUPATI |
| 2 | Periodicity of its Publication | Monthly |
| 3 | Honorary Editor | Sri M V S Prasad I A S ,<br>Executive Officer, T T D |
| 4 | Printer's Name | Sri M Vijayakumar Reddy, L P T , |
| | Whether citizen of India | Yes |
| | Address | Manager T T D Printing Press,<br>Tirupati |
| 5 | Editor & Publisher's Name | Sri K Subba Rao, M A , |
| | Whether citizen of India | Yes |
| | Address | Editor, Sapthagiri,<br>T T D Journal, Tirupati |
| 6 | Name and addresses of individuals who own the Newspaper and partners or shareholders holding more than one per cent of the total capital | Board of Trustees represented by the Executive Officer on behalf of T T D , Tirupati |

*I, K Subba Rao, hereby declare that the particulars given above are true to the best of my knowledge and belief*

TIRUPATI (Sd ) K SUBBA RAO,

*Date 29 2 1992* *Signature of the Publisher*

# ಋಗ್ವೇದದ ಸಾಪೇಕ್ಷತೆ

-ಸಮಿೀರಣ ಚಂದ್ರ ಚಕ್ರವರ್ತಿ

ಪರಂಪರೆಯ ದೃಷ್ಟಿಯಲ್ಲಿ ವೇದಗಳು ಅಮೃತವಾದವು ಧರ್ಮದ ವಿಷಯದಲ್ಲಿ ಕಡೆಯ ನ್ಯಾಯ ನಿರ್ಣಯ ಸ್ಥಾನವಾಗಿದ್ದು ಸರ್ವಕಾಲಕ್ಕೂ ಸೂಕ್ತವಾಗಿ ಸಾಪೇಕ್ಷವಾದವುಗಳಾಗಿವೆ ಹಾಗಾಗಿ ಇಂದಿನ ಸಮಾಜದಲ್ಲಿಯೂ ವೇದಗಳು ತಮ್ಮ ಸಾಪೇಕ್ಷತೆಯನ್ನು ಕಳೆದುಕೊಂಡಿಲ್ಲ ವೇದರಾಶಿಯಲ್ಲೇ ಋಗ್ವೇದವು ಅತಿ ಪ್ರಾಚೀನವೂ ಅತಿ ಅಧಿಕಾರಿಕವೂ ಆಗಿ ವಿಶೇಷಸ್ಥಾನ ಪಡೆದಿದೆ ಇಂದಿಗೂ ಹಿಂದೂಗಳು ತಮ್ಮ ಪ್ರಾರ್ಥನೆ ನಿವೇದನೆ ಅನುಷ್ಠಾನಗಳಲ್ಲಿ ಋಗ್ವೇದೀಯ ಮಂತ್ರಗಳನ್ನು ಬಳಸುತ್ತಾರೆ

ಋಗ್ವೇದದ ಋಷಿಗಳ ಗುಣಾತ್ಮಕ ಹಾಗೂ ಆಶಾದಾಯಕ ದೃಷ್ಟಿಕೋನ - ಇಹದ ಪ್ರಾಪಂಚಿಕ ಜೀವನದ ಬಗ್ಗೆ ಕರ್ಮ ಸಂದೇಶದ ಬಗ್ಗೆ ಸೌಹಾರ್ದದ ಬಗ್ಗೆ, ಐಹಿಕ ಆಧ್ಯಾತ್ಮಿಕ ಸಂಮಿಳನದ ಬಗ್ಗೆ ಅವರು ಹೊಂದಿದ್ದ ದೃಷ್ಟಿಕೋನ -ಇಂದಿಗೂ ನಮ್ಮ ಜೀವನವನ್ನು ಉತ್ತಮಗೊಳಿಸಬಲ್ಲದು

ಆಧುನಿಕ ಪರಿಶೋಧನೆಯ ಯುಗ ಆರಂಭವಾದಾಗಿನಿಂದ ಪ್ರಾಚೀನ ಭಾರತದ ವಿವಿಧ ಮುಖಗಳ (ಭಾಷೆ ಸಾಹಿತ್ಯಕ ಅಭಿವೃದ್ಧಿ ಪುರಾಣ ಸಾಮಾಜಿಕ ಸಾಂಸ್ಕೃತಿಕ ಚರಿತ್ರೆ ಇತ್ಯಾದಿ) ಅಧ್ಯಯನದಲ್ಲಿ ಅತಿ ಹೆಚ್ಚಿನ ನೆರವು ನೀಡುವುದೆಂಬುದು ಸ್ಪಷ್ಟವಾಗಿದೆ ಅವಿನಾಶಿಯಾದ ಪರಂಪರೆಯ ಋಗ್ವೇದ ಪ್ರಚಾರದಿಂದ ಇಂದಿನ ಹಲವಾರು ಸಂಕಷ್ಟಗಳಿಂದ ಹೊರಬೀಳಲು ನಮಗೆ ಬೇಕಾದ ನೆರವು ಸಿಗಬಹುದಾಗಿದೆ

ಈಗ ವೇದವೆಂದರೇನೆಂಬ ಪ್ರಶ್ನೆಯನ್ನು ತೆಗೆ ...ಕೊಳ್ಳಬಹುದು ವೇದಗಳಲ್ಲಿ ಎರಡು ...ಗಗಳಿವೆ ತಾತ್ವಿಕ ಹಾಗೂ ಪ್ರಾಯೋಗಿಕ ...ವು ಮಂತ್ರ ಬ್ರಾಹ್ಮಣಗಳೆರಡರಲ್ಲೂ ಹರ...ವೆ ಮೊದಲ ಭಾಗವು ದೈವದ ತತ್ವವನ್ನು ...ಲ್ಲ ಮುಖಗಳಿಂದಲೂ ನೋಡಿ ದೈವ ಮನು...ರ ಭೌತಿಕ ಬೌದ್ಧಿಕ ಸಂಬಂಧಗಳನ್ನು ಪ್ರಸ್ತುತಪ...ಸಿದರೆ ಪ್ರಾಯೋಗಿಕ ಭಾಗದಲ್ಲಿ ದೈವದ ಸಂತು...ತೆಗಾಗಿ ನಾವು ನಡೆಸುವ ಆರಾಧನೆಯ ಆಚಾರ...ಗವನ್ನು ಕಾಣುತ್ತೇವೆ ಋಗ್ವೇದ ಮಂತ್ರಗಳಲ್ಲಿ ...ವ ತತ್ವ ಮಂತ್ರಗಳಲ್ಲಿ ಅಭಿವ್ಯಕ್ತವಾಗಿದೆ ವೇದ...ಳ ಪ್ರಾಯೋಗಿಕ ಭಾಗವಾದ ಯಜ್ಞ ಯಾಗಾ...ಗಳು ಯಜುರ್ವೇದದಲ್ಲಿ ಬರುತ್ತವೆ ಋಗ್ವೇ...ವು ಪ್ರಕೃತಿಯ - ಅಗ್ನಿ ವಾಯು ಸೂರ್ಯ ...ಷನ್, ಇಂದ್ರ ಮೊದಲಾದ ಭೌತಿಕಾಂಶಗಳೊ...ನೆ ಸಂಬಂಧ ಪಡೆದ ದೈವವನ್ನು ವಿವರಿಸುತ್ತದೆ ...ವೆಲ್ಲ ಪ್ರಾಕೃತಿಕ ವಿಷಯಗಳು ವೇದಗಳು ...ಕೃತಿಯ ಹೊರಗೂ ಒಳಗೂ ಒಬ್ಬ ದೇವ...ರುವುದಾಗಿ ಹೇಳುತ್ತವೆ ವಿವಿಧ ನಾಮರೂಪ...ಳ ಒಂದು ದೈವವನ್ನು ಆರಾಧನೆ ಮಾಡಲಾಗು...ದೆ (ಏಕಂ ಸತ್ ವಿಪ್ರಾ ಬಹುಧಾ ವದಂತಿ) ...ಾರಮಾರ್ಥಿಕ ವಿಷಯವಾದದ್ದು ದೈವ ದೈವ...ನ್ನು ಸೃಷ್ಟಿಕರ್ತ ಉದ್ಧಾರಕರ್ತ ಸಂಹಾರಕರ್ತ...ಂದು ವರ್ಣಿಸಲಾಗಿದೆ ಆತನ ಶ್ರೇಯೋಭಿ...ಾಶಿತ್ವವನ್ನು ಎಲ್ಲ ಮಂತ್ರಗಳಲ್ಲೂ ವಿವರಿಸಲಾ...ದೆ ಅತೀತವಾದ ದೈವಿಕತೆ ಮನುಷ್ಯರೂಪದಲ್ಲಿ ...ಮನುಷ್ಯ ರೀತಿಯಲ್ಲಿ ಸಂಧಿಸುತ್ತದೆ ಮನುಷ್ಯ ...ಮನುಷ್ಯ ಸಂಬಂಧಗಳಲ್ಲೂ ಅದು ಸಾಂದರ್ಭಿಕ...ಾಗುತ್ತದೆ ಒಳ್ಳೆಯ ಬಾಳ್ವೆಗಾಗಿ ದೈವವನ್ನು ...ಾರ್ಥಿಸಲಾಗಿದೆ ಸಾಮಾಜಿಕ ಆರ್ಥಿಕ ರಾಜ...ಯ ಏಳ್ಗೆಗಳನ್ನು ವೈವಿಧ್ಯಮಯವಾಗಿ ಚಿತ್ರಿ...ಲಾಗಿದೆ ದೈವಿಕ ಅನುಗ್ರಹವನ್ನು ಪಡೆಯುವ ...ೈವದಲ್ಲಿ ಒಂದಾಗುವಿಕೆಯನ್ನೂ ತಿಳಿಸಲಾಗಿದೆ ...ಋಗ್ವೇದ ಸಾವಿರಾರು ಮಂತ್ರಗಳು ಎಲ್ಲರೀತಿಯ ...ಹಿಕ ಆಧ್ಯಾತ್ಮಿಕ ಅಭಿವೃದ್ಧಿಯನ್ನು ಒಳಗೊಂ...ವೆ ಒಂದು ಗಂಟೆಯಿಂದ ಹಲವು ದಿನಗಳವ...ಗೆ - ವರ್ಷಗಳಿಗೂ - ಹರಡುವ ಆಚಾರಗ...ನ್ನು - ಅಗ್ನಿಹೋತ್ರ[illegible]ದಾರಂಭಿಸಿ ವಿಶ್ವಸೃಜಮ...ರುದವರೆಗೆ ವಿವರಿಸಲಾಗಿದೆ ಆಚಾರವೆಂ...ದರೆ ಒಂದನ್ನು ದೈವ[illegible]ಪಡೆಯಲು ಪ್ರಾರ್ಥನೆ...ೊಂದಿಗೆ ನಿವೇದಿಸುವಿಕೆ (ದೇವತಾ ಉದ್ದೇಶ್ಯಕ ...ದ್ರವ್ಯತ್ಯಾಗ) ಮಂತ್ರಗಳಿಂದ ಆಗುವ ಪ್ರಯೋಜ...ನಗಳೇ ಅಲ್ಲದೆ ಈ ನಿವೇದನೆಗಳೂ ತಮ್ಮದೇ ...ರಿಯನ್ನು ಹೊಂದಿವೆ ಋಗ್ವೇದೀಯ ದೈವಗಳಾದ ಅಗ್ನಿ ಇಂದ್ರ ಸೋಮ ಮೊದಲಾದುವರನ್ನೇ ಇಲ್ಲೂ ಹೊಗಳಲಾಗಿದೆ ಆದರೆ ಕೊನೆಗೆ ಇವರನ್ನೆಲ್ಲ ಒಂದೇ ದೈವವನ್ನಾಗಿ ತೆಗೆದುಕೊಳ್ಳಲಾಗಿದೆ ಈ ಆಚಾರಗಳನ್ನು ದೇವಯಾಗವೆನ್ನಲಾಗಿದೆ ಎಲ್ಲ ಸಾಮಗಾನವೂ ಸ್ತೋತ್ರ ಮತ್ತು ಶಾಸ್ತ್ರಗಳಲ್ಲಿವೆ ಋಗ್ವೇದ ಎಲ್ಲ ದೇವತೆಗಳನ್ನೂ ಅವರ ಹೆಸರು ಹಿಡಿದು ಹೇಳಿದ್ದರೂ ಕೊನೆಗೆ ಸವನ ಮುಖ ಹೋಮದಲ್ಲಿ ಹಲವು ಹೆಸರನ್ನುಳ್ಳ ಒಬ್ಬನೇ ದೇವರಿಗೆ ಈ ಹೋಮವನ್ನು ಅರ್ಪಿತ ಎನ್ನಲಾಗಿದೆ ಹೀಗೆ ಮಂತ್ರಗಳೂ ಬ್ರಾಹ್ಮಣಗಳೂ ದೈವದ ಬಗ್ಗೆಯೂ ಆಚಾರಗಳ ಬಗ್ಗೆಯೂ ವಿಶಿಷ್ಟ ಗುಣವನ್ನು ಹೊಂದಿವೆ ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ದೈವಿಕತೆಯ ಕಲ್ಪನೆ ಅನೇಕ ಪರಿವರ್ತನೆಗಳನ್ನು ಹೊಂದಿ ಅನೇಕ ಹೊಸ ಹೆಸರುಗಳನ್ನು ಪಡೆದಂತ ಅವುಗಳಲ್ಲಿ ಹಲವು ಪ್ರಧಾನವಾದವು ಶೈವ ವೈಷ್ಣವ ಶಾಕ್ತ ಪಂಥರ ಧರ್ಮಗಳು ಹೊಸ ಬಗೆಯ ಅನುಷ್ಠಾನಗಳನ್ನೂ ಆದೇಶಿಸಿದವು ಆದ್ದರಿಂದಲೇ ಅವು ಬಹುಪ್ರಸಿದ್ಧ ದೇವತೆಗಳನ್ನು ವಿಗ್ರಹರೂಪದಲ್ಲಿ ಅವುಗಳ ಕಥೆಗಳೊಡನೆ ಪೂಜಿಸುವುದೂ ಪ್ರಸಿದ್ಧ ವೇದಗಳಲ್ಲಿ ಕಂಡುಬರುವ ಯಜ್ಞಗಳ ಮೂಲರೂಪಗಳು ಜಗತ್ತಿನಿಂದ ನಿಧಾನವಾಗಿ ಮರೆಯಾಗುತ್ತಿವೆ ಕೆಲವೇ ಮಂದಿ ವೈದಿಕ ಸಂಸ್ಕಾರಗಳನ್ನು ಮಾಡಲು ಮುಂದೆ ಬರುತ್ತಿದ್ದಾರೆ ಇತರರು ವೇದಗಳಿಗೆ ಪ್ರಾಧಾನ್ಯ ನೀಡುತ್ತಲೇ ಪ್ರಸಿದ್ಧ ದೇವರುಗಳನ್ನು ದೇವತೆಗಳನ್ನು ಅನುಸರಿಸುತ್ತಾರೆ ವೈದಿಕ ಚಿಂತನೆಗಳು ಉನ್ನತ ಸಂಸ್ಕೃತಿಯವು ಪ್ರೌಢ ಬೆಳವಣಿಗೆಯವು ಒಂದು ಸಾಮಾಜಿಕ ಅರ್ಥದಲ್ಲಿ ಅವು ಇಡೀ ಜಗತ್ತನ್ನು ಒಂದು ಘಟಕವೆಂದು ಬಗೆಯುತ್ತವೆ ಸಮಾಜದ

ಲ್ಲಿನ ವಿಶ್ವಮಾನವ ದೃಷ್ಟಿ ಕೋನದಿಂದಾಗಿ ಇಡೀ ವಿಶ್ವವನ್ನು ಒಂದು ಸಂಸಾರವೆಂಬಂತೆ ಯೋಚಿಸಲು ಅವಕಾಶ ಮಾಡಿಕೊಟ್ಟಿವೆ ಸರಹದ್ದು ಮಿತಿಗಳನ್ನು ದಾಟಿ – ಸ್ತ್ರೀ ಪುರುಷರನ್ನು ಒಳಗೊಂಡು ಇಡೀ ಮಾನವ ಜನಾಂಗಕ್ಕೆ ಒಳಿತನ್ನು ಪ್ರಾರ್ಥಿಸಲಾಗಿದೆ ಸ್ವಸ್ತಿ ಎಂಬುದೊಂದು ಒಳಿತಿನ ಇರುವಿಕೆಯನ್ನು ತಿಳಿಸುವ ವೈದಿಕ ಪದವಾಗಿ ಅದನ್ನು ಇಡೀ ಜಗತ್ತಿಗೆ ಅನ್ವಯಿಸಲಾಗಿದೆ

ಸ್ವಸ್ತಿ ಗೋಭ್ಯ ಜಗತೇ ಯತಾನ
ಸರ್ವಮಿತ್‌ಜಗತ್ |
ಅಯಕ್ಷ್ಮಮುಂ ಸುಮನಾ ಅಸತ್ |
ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ |

ಹೀಗೆಯೇ ಸಂಸ್ಕಾರಗಳ ಕೊನೆಯಲ್ಲಿ ಸರ್ಸ್ಮವಾಕ ಎಂಬ ಸರ್ವಶ್ರೇಯಸ್ಸಿನ ಸಂಸ್ಕಾರವನ್ನು ಕಾಣುತ್ತೇವೆ ಎಲ್ಲವಕ್ಕೂ ಸ್ವಸ್ತಿ ಎಂದು ಇಲ್ಲಿನ ಪ್ರಷ ಹೇಳುತ್ತದೆ ಹೋತಾರರು ಹೇಳುವ ಮಂತ್ರಗಳು ದೈವೀ ಸ್ವಸ್ತಿರಸ್ತು ನ ಸ್ವಸ್ತಿರ್ ಮಾನುಷೇಭ್ಯ ಎಂಬುದನ್ನು ಒಳಗೊಂಡಿದೆ ಯಾರೋ ಮಾಡುವ ಪ್ರಾರ್ಥನೆ ಯಾರೋ ಮಾಡುವ ಅನುಷ್ಠಾನ ಆದರೂ ಇಡೀ ವಿಶ್ವಕ್ಕೆ ಒಳಿತಾಗಲಿ ಎಂಬುದು ಮೂಲ ಉದ್ದೇಶ ಆಧುನಿಕ ಜಗತ್ತಿನಲ್ಲಿ ಅಂತರ ರಾಷ್ಟ್ರೀಯ ನೆಲೆಯಲ್ಲಿ ಐಕಮತ್ಯವೆಂಬುದು ಹೊಸ ಭಾವನೆ ವಿಶ್ವಸಂಸ್ಥೆ ಈಗ ಇಲ್ಲಿದೆ ಆದರೆ ಆಳವಾಗಿ ಚಿಂತಿಸುವ ವೇದಗಳು ಇಡೀ ಜಗತ್ತನ್ನೇ ಒಂದು ಘಟಕವೆಂದು ಅಂದೇ ಪರಿಭಾವಿಸಿದವು ಮಂತ್ರ ಬ್ರಾಹ್ಮಣಗಳಲ್ಲಿ ಹರಿದ ವೈದಿಕ ಸಂಸ್ಕೃತಿ ಜಗತ್ತಿನ ಚಿಂತನೆಯ ಶಿಖರದಲ್ಲಿ ನಿಲ್ಲುತ್ತದೆ ಇತರ ಧರ್ಮಗ್ರಂಥಗಳಂತಲ್ಲದೆ ವೇದಗಳು ಇಹಜೀವನದ ಬಗ್ಗೆಯೂ ಆಸಕ್ತವಾಗಿವೆ ಮನುಷ್ಯ ಚಿಂತನೆಯ ಆಳವನ್ನು ಚಿತ್ರಿಸುತ್ತವೆ ಎಂತಲೇ ವೈದಿಕ ಸಂಸ್ಕೃತಿ ಶಾಶ್ವತ ಮೌಲ್ಯವುಳ್ಳದ್ದಾಗಿದೆ ವಿಸ್ತಾರವಾದ ಸಂಸ್ಕಾರಗಳನ್ನು ಆದೇಶಿಸುತ್ತದೆ ಜೊತೆಗೇ ಸರಳವಾದ ದೈವಪ್ರಜ್ಞೆಯನ್ನೂ ತಿಳಿಸುತ್ತದೆ ಕ್ಲಿಷ್ಟವೂ ಬೆಲೆಯುಳ್ಳವೂ ಆದ ಸಂಸ್ಕಾರಗಳನ್ನು ವಿವರಿಸಿದ ಮೇಲೆ ದೇವರ ಚಿಂತನೆ ಮಾಡುತ್ತ ಅದನ್ನು ಉಳಿಸಿಕೊಳ್ಳುವುದೇ ಮನದ ಪಾಪಗಳನ್ನು ತೊಳೆದುಕೊಂಡು ಮನುಷ್ಯನ ಮೂಲ ಶುದ್ಧತೆಯನ್ನು ಪಡೆಯಲು ದಾರಿ ಎಂದು ತಿಳಿಸುತ್ತದೆ ಈ ವಿಷಯದಲ್ಲಿ ವೇದಗಳು ಒಂದು ಮಾರ್ಗವನ್ನು ಅನುಸರಿಸಿ ದೈವವನ್ನು ತಿಳಿಯಲು ಹೇಳುತ್ತವೆ ಇತರ ಧರ್ಮಗ್ರಂಥಗಳು ಇತರ ಮಾರ್ಗಗಳ ಬಗ್ಗೆ ಹೇಳಿದರೆ ಆ ಬಗ್ಗೆ ಚಿಂತೆ ಬೇಡವೆಂದೂ ಅವರವರು ಅವರವರ ಹಾದಿಯಲ್ಲಿ ನಡೆಯಬೇಕೆಂದೂ ಹೇಳುತ್ತವೆ ವೈರುಧ್ಯಗಳಿಗೆ ಎಡೆಕೊಡುವ ಅಗತ್ಯವಿಲ್ಲವೆನ್ನುತ್ತವೆ ಎಲ್ಲ ರಸ್ತೆಗಳೂ ರೋಮಿಗೇ ಹೋಗುತ್ತವೆ (ಇಲ್ಲಿ ತಿರುಪತಿಯನ್ನೇ ಸೇರುತ್ತವೆ)–

ಸಮೇತ ವಿಶ್ವ ವಚಸಾ ಪಿತಂ ದಿವ
ಯ ಏಕೋ ವಿಭು
ಅತಿಥಿ ಜನಾನಾಂ ಸಪೂರ್ವ್ಯ
ನೂತನಮಾ ವಿವಾಸತಿ
ತಂ ವರ್ತನೀ ವೃತೇ – ಏಕಮಿ ಭೂರಿ

ಧಾರ್ಮಿಕ ಕ್ಷೇತ್ರದಲ್ಲಿ ಶಾಂತಿಯುತ ಸಹಬಾಳ್ವೆಯನ್ನು ವೇದಗಳು ಆದೇಶಿಸುತ್ತವೆ ಇದು ನಮ್ಮ ಕಾಲಕ್ಕೆ ಆಧ್ಯಾತ್ಮದ ಕ್ಷೇತ್ರದಲ್ಲಿ ಮಾತ್ರವೇ ಅಲ್ಲದೆ ಸಾಮಾಜಿಕ ಕ್ಷೇತ್ರದಲ್ಲೂ ಸಮಾನವಾಗಿಯೇ ಅನ್ವಯವಾಗುತ್ತದೆ ವೇದಗಳು ಶಾಂತಿಯುತ ಸಹಬಾಳ್ವೆಯನ್ನು ಅವಧಾರಿಸುತ್ತದೆ ಹಾಗೆಯೇ ಎಲ್ಲರಿಗೂ ಬದುಕುವ ಗಳಿಸುವ ಸಮಾನಾವಕಾಶಗಳನ್ನು ನೀಡಲಾಗಿದೆ (ಅಸಂಬಧಂ ಬಧ್ನತೋ ಮಾನವಾನಾಮ್) ಜನಾಂಗೀಯ ಮೂಲಗಳಲ್ಲಿ ಬಣ್ಣಗಳಲ್ಲಿ ಬಿಳಿಯ ಕರಿಯ ಕೆಂದು – ಜನರ ನಡುವೆ ವಿಭಿನ್ನತೆಯಿರಬಹುದಾದರೂ ಇಡೀ ಮಾನವ ಕುಲದ ಒಳಿತಿಗೆ ತಮ್ಮ ಶಕ್ತಿಯ ಪಂತಿಗೆ ನೀಡುತ್ತ ಸ್ವತಂತ್ರವಾಗಿ ಬಾಳಲು ಎಲ್ಲರಿಗೂ ಅವಕಾಶವಿದೆ ಮನುಷ್ಯ ಸಮಾಜ ಮೃಗಸಮಾಜದಿಂದ ಹೊರಬಂದಿದ್ದರೂ ಮನುಷ್ಯ ತನ್ನ ಮೃಗಮನೋಭಾವವನ್ನು ಸಭ್ಯವಾಗಿಟ್ಟಿದ್ದಾನೆ ಒಟ್ಟಿನಲ್ಲಿ ನಾವು ಮಾನವ ಚಿಂತನೆಯನ್ನೂ ಮಾನವ ನಾಗರಿಕತೆಯನ್ನು ಬೆಳೆಸಿದ್ದೇವೆ ಆದರೂ ಮೃಗತೆ ಯಾವಾಗಲೂ ಇದ್ದದ್ದೇ ಇದನ್ನು ಎಲ್ಲ ಮಾನವ ಶಾಸ್ತ್ರಜ್ಞರೂ ಒಪ್ಪಿದ್ದಾರೆ ಮೇಲ್ಮಟ್ಟದ ಚಿಂತನೆಯ ನಾಗರಿಕ ಮನುಷ್ಯನನ್ನು ಒಮ್ಮೆ ಹೊಡೆದೆವೆಂದರೆ ಆತ ತನ್ನ ಮೇಲ್ಮಟ್ಟದ ಮಾನವ ಗುಣಗಳನ್ನು ಕೂಡಲೇ ಮರೆತು ಮೃಗದಂತೆಯೇ ವರ್ತಿಸುತ್ತಾನೆ ಎಂದ ಮೇಲೆ ಇನ್ನೂ ಮೃಗತೆ ಮಾನವ ಸ್ವಭಾವದಲ್ಲಿ ಮುಂದುವರಿದಿದೆಯಾಗಿ ಶಾಂತಿಯನ್ನು ಕಾಪಾಡುವುದು ದುಸ್ಸಾಧ್ಯ ಹಾಗೆಯೇ ಮಾನವ ಶಕ್ತಿಯ ಆಧಾರದಿಂದ ಮಾನವ ನಾಗರಿಕತೆಯು ಶಾಶ್ವತವಾಗುವುದಿಲ್ಲ ಎಂತಲೇ ವೇದಗಳು ಮಾನವ ಸಮಾಜದಲ್ಲಿ ಯುದ್ಧ ಶಾಂತಿಗಳು ಅನಿವಾರ್ಯವೆನ್ನುತ್ತವೆ ಶಾಂತಿಯ ಸಾಧಾರಣವೂ ಯುದ್ಧವೂ ಅಘಘಾತವೂ ಆದವು ವೇದಗಳು ಶಾಂತಿಯ ಉದ್ದೇಶದಿಂದ ಪ್ರಾರ್ಥನೆ ಮಾಡುತ್ತಲೇ ಶತ್ರುಗಳನ್ನು ಜಯಿಸಲು ಮಾರ್ಗ ಶೋಧನೆ ಮಾಡುತ್ತವೆ ಮನುಷ್ಯ ಸ್ವಾಭಾವದ ದ್ವಂದ್ವಗಳಿಂದಾಗಿ ಅವನ ಮುಂದೆ ಒಳಿತು ಕೆಡುಕುಗಳಿವೆ ಎರಡರಲ್ಲಿ ಒಂದರ ಆಯ್ಕೆ ಅವನಿಗೇ ಬಿಟ್ಟದ್ದು ನೀವು ಒಳಿತನ್ನು ಆಯ್ದುಕೊಂಡಲ್ಲಿ ನೀವೂ ಬದುಕಿ ಇತರರನ್ನೂ ಬಾಳಬಿಡಬಹುದು ಕೆಡುಕನ್ನು ಆರಿಸಿಕೊಂಡರೆ ನೀವೂ ನಾಶವಾಗಿ ಇತರರನ್ನೂ ನಾಶಗೊಳಿಸುವಿರಿ ಪ್ರಾಯೋಗಿಕವಾಗಿ ವೇದಗಳು ದೈವಿಕ ಜೀವನ ವಿಧಾನವನ್ನು ಗುಣಾತ್ಮಕವಾಗಿ – ಆದೇಶಿಸುತ್ತವೆ ಶ್ರೀಕೃಷ್ಣನಿಂದ ದೇವಾಸುರ ಸಂಪತ್ ವಿಭಾಗ ಯೋಗವೆಂದು ಇದು ವಿವರಿಸಲ್ಪಟ್ಟಿದೆ ದೈವೀ ಸಂಪದವನ್ನು ಅನುಸರಿಸಿ ಯಾರಾದರೂ ಮುಂದುವರಿಯಬಹುದೆಂದು ಹೇಳುತ್ತಾನೆ ಇಲ್ಲಿ ಒಂದು ಮುಖ್ಯ ಅಂಶವನ್ನು ತಮ್ಮ ಗಮನಕ್ಕೆ ತರಲು ಬಯಸುತ್ತೇನೆ ವೇದಗಳು ಕೆಲಸವೇ ಕೇಂದ್ರವಾದ ಗುಣಾತ್ಮಕ ಬಾಳುವೆಯನ್ನು ಆದೇಶಿಸುತ್ತವೆ (ಕುರ್ವನ್ ಏವ ಇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾ) ವೇದಗಳು ದೈವಾನುಗ್ರಹವನ್ನು ಪಡೆಯಲು ನಮ್ಮನ್ನು ಕಾರ್ಯೋನ್ಮುಖರಾಗಲು ತಿಳಿಸುತ್ತವೆ (ನಋತೇ ಶ್ರಾಂತಸ್ಯ ಸಖ್ಯಾಯ ದೇವಾ) ಶಾಶ್ವತವಾದ ಪ್ರಾಧಾನ್ಯಪಡೆದ ವೇದಗಳಲ್ಲಿ ಇಂತಹ ಸಂದೇಶಗಳು ಬಹಳವಿವೆ

***

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ ೯ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅದವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು

**ತಿ ತಿ ದೇ**

# ವೇದಶಾಸ್ತ್ರಗಳ ರಾಷ್ಟ್ರೀಯ ಸಮ್ಮೇಳನ

ವರದಿ – ಬಿ ಎಸ್ ಎಸ್

ಭಾರತದೇಶದ 20ನೇ ಶತಮಾನದ ಚರಿತ್ರೆ ಯಲ್ಲಿ ಅತ್ಯಂತ ಹಿರಿದಾದ ವೇದ ಶಾಸ್ತ್ರಗಳ ರಾಷ್ಟ್ರೀಯ ಸಮ್ಮೇಳನ ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯ ಕೃಪಾಶೀರ್ವಾದದ ಶ್ರೀ ರಕ್ಷೆಯಲ್ಲಿ 29-1-92 ರಿದ 3-2-92 ರವರೆಗೆ ಯಶಸ್ವಿಯಾಗಿ ನೆರವೇರಿತು ದೇಶದ ವಿವಿಧ ಮೂಲೆಗಳಿಂದ ಸುಮಾರು 2000 ಕ್ಕೂ ಮೀರಿದ ವೇದ ಶಾಸ್ತ್ರ ಪಂಡಿತ ಮನ್ನರು ವಿವಿಧ ಮಠದ ಪೀಠಾಧಿಪತಿಗಳು ಕೇಂದ್ರ ರಾಜ್ಯ ಮಂತ್ರಿವ ರ್ಯರು ಭಾರತೀಯ ಸಂಸ್ಕೃತಿಯ ವಿವಿಧ ರಂಗ ಗಳ ಸ್ವಯಂಸೇವಕರು ತಿರುಮಲೆಯಲ್ಲಿ ಆರುದಿನ ಗಳ ಕಾಲ ಸೇರಿ ದಿನಕ್ಕೆರಡು ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ವಿಚಾರ ವಿನಿಮಯ ಮಾಡಿಕೊಂಡು ವೇದ ಶಾಸ್ತ್ರಾಧ್ಯಯನದಲ್ಲಿ ವೈದಿಕ ಸಂಸ್ಕೃತಿ ಪ್ರಸಾರದಲ್ಲಿ ಕಂಡುಬರುವ ಬಂದಿರುವ ಸಮ ಸ್ಯೆಗಳನ್ನು ಕುರಿತು ಚರ್ಚಿಸಿ ಪರಿಷ್ಕಾರರೂಪದ ಹಲವಾರು ನಿರ್ಣಯಗಳನ್ನು ತಲುಪುವಲ್ಲಿ ಯಶ ಸ್ವಿಯಾದರು

ನಾಲ್ಕು ವೇದಗಳು ಆರು ವೇದಾಂಗಗಳು ಷಡ್ದರ್ಶನಗಳು ಆಗಮಗಳು ಶ್ರೌತ ಸ್ಮಾರ್ತ ಸಂಪ್ರದಾಯಗಳ ಬಗ್ಗೆ ನಡೆದ ವಿಚಾರಗೋಷ್ಠಿಗ ಳಲ್ಲಿ ಇವುಗಳಲ್ಲಿನ ಪರಿಶೋಧನೆ ಪ್ರಚಾರ ಪರಿ ರಕ್ಷಣೆಗಳಿಗಾಗಿ 100 ಕ್ಕೂ ಮಿಕ್ಕಿದ ಸಿದ್ಧಾಂತ ಲೇಖನಗಳನ್ನು ಮಂಡಿಸಲಾಗಿ ವ್ಯಾಪಕ ಚರ್ಚೆ ನಡೆಯಿತು (ಇವುಗಳಲ್ಲಿ ಹಲವು ಪ್ರಾಸ್ತಾವಿಕ ಪ್ರಧಾನ ಉಪನ್ಯಾಸಗಳನ್ನೂ ಹಲವು ಉಪನ್ಯಾ ಸಗಳ ಸಾರರೂಪವನ್ನೂ ಇದೇ ಸಂಚಿಕೆಯ ಇತರ ಪುಟಗಳಲ್ಲಿ ಕನ್ನಡದಲ್ಲಿ ನೀಡಲಾಗಿದೆ)

## ಜನವರಿ 29, 1992

ಕಂಚಿಪೀಠಾಧಿಪತಿ ಶ್ರೀ ಶ್ರೀ ಜಯೇಂದ್ರ ಸರ ಸ್ವತಿ ಶ್ರೀ ಶ್ರೀ ವಿಜಯೇಂದ್ರ ಸರಸ್ವತಿ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು ಶ್ರೀ ಶ್ರೀ ವಿದ್ಯಾಪಯೋನಿಧಿ ತೀರ್ಥರು ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು ಶ್ರೀ ಶ್ರೀ ಗೋವಿಂದ ರಾಮಾನುಜ ಪೆದ್ದಜಿಯರು ಶ್ರೀ ಶ್ರೀ ಮನ್ನಾರಾ ಯಣ ಚಿನ್ನಜಿಯರ್ ಆಂಡವನ್ ಸ್ವಾಮಿಗಳು ಮೇಲ್ಕೋಟೆ ಮಠಾಧಿಪತಿ ಶ್ರೀ ಶ್ರೀ ಯತಿಂದ್ರ ಸಂಪತ್ಕುಮಾರ್ ರಾಮಾನುಜರು – ಮೊದಲಾದ ಶ್ರೀ ಪಾದಂಗಳು ತಿ ತಿ ದೇವಸ್ಥಾನಗಳ ಧರ್ಮಕ



ರ್ತರ ಮಂಡಳಿಯ ಸದಸ್ಯರಾದ ಶ್ರೀ ದೊರೆ ಸ್ವಾಮಿರಾಜು ಶ್ರೀಮತಿ ದಾಸರಿ ಪದ್ಮ ಮುಜ ರಾಯಿ ಇಲಾಖಾ ಕಮಿಷನರ್ ಶ್ರೀ ಸತ್ಯರಾಜು ಜಿಲ್ಲಾಧಿಕಾರಿ ಶ್ರೀ ಐ ವಿ ಸುಬ್ಬರಾವ್ ಮತ್ತಿ ತರು ಆಗಮಿಸಿದ್ದ ಸಮ್ಮೇಳನದ ಆರಂಭೋತ್ಸವ ಸಭೆಗೆ ಮುಖ್ಯ ಅತಿಥಿಗಳಾಗಿ ಉಪರಾಷ್ಟ್ರಪತಿ ಡಾ|| ಶಂಕರ ದಯಾಳಶರ್ಮ ಕೇಂದ್ರ ಪ್ರಸಾರ ಖಾತೆಯ ಮಂತ್ರಿ ಶ್ರೀ ಅಜಿತಕುಮಾರ್ ಪಂಜಾ ಆಂಧ್ರಪ್ರದೇಶದ ಮಂತ್ರಿ ಶ್ರೀ ಚೆಂಗಾರೆಡ್ಡಿ ಅವರು ಆಗಮಿಸಿದ್ದರು

29-1-92 ರ ಬೆಳಗ್ಗೆ ಶ್ರೀ ವೆಂಕಟೇಶ್ವರ ಸ್ವಾಮಿಯ ಉತ್ಸವ ವಿಗ್ರಹಗಳನ್ನು ವೀಧಿ ಮೆರ ವಣಿಗೆಯಲ್ಲಿ ತಿರುಮಲೆಯ ನಾಲ್ಕು ರಥ ಬೀದಿ ಗಳಲ್ಲಿ ಸಮ್ಮೇಳನದ ಪ್ರತಿನಿಧಿಗಳು ಆಚಾರ್ಯ ಪುರುಷರು ಅತಿಥಿಗಳ ನಡುವೆ ಕರೆದೊಯ್ಯಲಾ ಯಿತು ನಂತರ ಆರ್ಷ ವಿಜ್ಞಾನ ಸದಸ್ಸಿನಲ್ಲಿ ಉಪರಾಷ್ಟ್ರಪತಿ ಡಾ|| ಶಂಕರದಯಾಳ ಶರ್ಮರು ದೀಪ ಹಚ್ಚಿಸುವುದರ ಮೂಲಕ ತಿ ತಿ ದೇ ಅಧ್ಯಕ್ಷ ಶ್ರೀ ಟಿ ಸುಬ್ಬುರಾಮಿರೆಡ್ಡಿಯವರ ಅಧ್ಯಕ್ಷತೆಯಲ್ಲಿ ಸಮ್ಮೇಳನವನ್ನು ಉದ್ಘಾಟಿಸಿದರು



ಸಮ್ಮೇಳನವನ್ನು ಉದ್ಘಾಟಿಸಿದ ಉಪರಾಷ್ಟ್ರಪತಿಯವರು ವೇದಗಳು ಜ್ಞಾನದ ಬತ್ತಲಾರದ ಖನಿಯೆಂದೂ ಇವುಗಳ ಉಪಯೋಗ ವಿಶ್ವವ್ಯಾಪಿಯಾಗುವಂತೆ ಮಾಡುವ ಹೊಣೆ ಭಾರತೀಯರಾದ ನಮ್ಮದಾಗಿದೆಯೆಂದೂ ನುಡಿಯುತ್ತ ಶಾಂತಿ ಸೌಹಾರ್ದಗಳನ್ನು ಸರ್ವತೋಮುಖ ಅಭಿವೃದ್ಧಿ ಸಮಾನತೆಗಳನ್ನು ಹರಡುವ ವೇದ ಸಂದೇಶವನ್ನು ಜಗತ್ತಿಗೆ ನೀಡುವಲ್ಲಿ ಭಾರತೀಯರು ಸಫಲರಾಗಬೇಕಾಗಿದೆಯೆಂದೂ ನುಡಿದರು ಈ ದಿಸೆಯಲ್ಲಿ ದೈವಸ್ವರೂಪರಾದ ಆಚಾರ್ಯರುಗಳ ಮಾರ್ಗದರ್ಶನ ವಿದ್ವಾಂಸ ಪ್ರತಿನಿಧಿಗಳಾದ ಸಭಿಕರಿಂದ ಸೃಜನಾತ್ಮಕವೂ ಕ್ರಿಯಾಶೀಲವೂ ಆದ ಕಾರ್ಯಕ್ರಮ ನಿಯೋಜನ ಆಗಲಿ ಎಂದು ಹಾರೈಸಿದರು

ಅಧ್ಯಕ್ಷತೆ ವಹಿಸಿದ್ದ ಅಧ್ಯಕ್ಷ ಶ್ರೀ ಟಿ ಸುಬ್ಬುರಾಮಿರೆಡ್ಡಿ ಅವರು ಎಲ್ಲ ನದಿಗಳೂ ಸಮುದ್ರವನ್ನು ಸೇರುವಂತೆ ವಿದ್ವಾಂಸರೆಲ್ಲ ವೆಂಕಟೇಶ್ವರಸ್ವಾಮಿ ಸನ್ನಿಧಿಯಲ್ಲಿ ಸೇರಿದ್ದಾರೆ ಇದರಿಂದ ಸಮುದ್ರದ ನೀರು ಮೇಲೇರಿ ಮಳೆಯಾಗುವಂತೆ ಇಡೀ ದೇಶಕ್ಕೆ ಆ ಮೂಲಕ ಜಗತ್ತಿಗೆ ಶಾಂತಿವರ್ಷವಾಗಲಿ ಎಂದು ಹಾರೈಸಿದರು

ಸಮ್ಮೇಳನದ ನೆನಪಿನ ಸಂಚಿಕೆ "ವೇದ - ದಿ ವರ್ಡ್ ಎಟರ್ನಲ್ ಆಂಗ್ಲ ಭಾಷಾಕೃತಿಯನ್ನು ಕೇಂದ್ರ ಪ್ರಸಾರಶಾಖಾಮಂತ್ರಿ ಶ್ರೀ ಅಜಿತ ಕುಮಾರ್ ಪಂಜಾ ಅವರು ಬಿಡುಗಡೆ ಮಾಡಿದರು ಸಮ್ಮೇಳನದಲ್ಲಿ ಓದಲಾಗುವ ವಿದ್ವತ್ ಪ್ರಬಂಧಗಳ ಸಾರಕೃತಿಯನ್ನು ಆಂಧ್ರಪ್ರದೇಶದ ಲಘುಪರಿಶ್ರಮಗಳ ಮಂತ್ರಿ ಶ್ರೀ ಚೆಂಗಾರೆಡ್ಡಿ ಅವರು ಬಿಡುಗಡೆ ಮಾಡಿದರು ದಿವ್ಯಪ್ರಬಂಧಗಳ ಹತ್ತು ಧ್ವನಿಸುರುಳಿಗಳನ್ನು ಪೆದ್ದ ಜೆಯಂಗಾರ್ಯರು ಬಿಡುಗಡೆ ಮಾಡಿದರು



ಸಮ್ಮೇಳನವನ್ನು ತಿ ತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರು ಸ್ವಾಗತಿಸಿದರು ಮುಖ್ಯ ಅತಿಥಿಗಳಾದ ಡಾ|| ಶಂಕರದಯಾಳ ಶರ್ಮ ಶ್ರೀ ಅಜಿತಕುಮಾರ ಪಂಜಾ ಶ್ರೀ ಆರ್ ಚೆಂಗಾರೆಡ್ಡಿ ಅವರುಗಳನ್ನು ಸನ್ಮಾನಿಸಿ ಶ್ರೀ ವೆಂಕಟೇಶ್ವರಸ್ವಾಮಿಯ ರಜತ ಪದಕಗಳನ್ನು ನೀಡಲಾಯಿತು

ವೇದ ಶಾಸ್ತ್ರ ಸಮ್ಮೇಳನ ಯಶಸ್ವಿಯಾಗಲೆಂದು ಪೀಠಾಧಿಪತಿಗಳ ಪರವಾಗಿ ಕಂಚಿ ಕಾಮಕೋಟಿ ಪೀಠದ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಅವರು ಆಶೀರ್ವಚನ ನೀಡಿದರು

## ಜನವರಿ 30, 1992

ವೇದಗಳು ಪ್ರಾಥಮಿಕ ಹಂತದ್ದು ಮತ್ತು ಬರ್ಬರತೆಯಿಂದ ಕೂಡಿದ್ದು ಎಂಬ ಹಲವು ಪಾಶ್ಚಾತ್ಯ ಹಾಗೂ ಭಾರತೀಯ ವಿದ್ವಾಂಸರ ಅಭಿಪ್ರಾಯವನ್ನು ರಾಷ್ಟ್ರೀಯ ವಿದ್ಯಾಪ್ರತಿಷ್ಠಾನದ (ಹೊಸದೆಹಲಿ) ಸದಸ್ಯಕಾರ್ಯದರ್ಶಿ ಡಾ|| ಕೀರ್ತಿ ಜೋಷಿಯವರು ಖಂಡಿಸುತ್ತ ವೇದಗಳನ್ನು ದಾಖಲಿಸಿದ ಪ್ರಾಚೀನ ಋಷಿಗಳು ಕಾಲ ಹಾಗೂ ಆಕಾಶಗಳ ಬಗ್ಗೆ ಖಚಿತವಾದ ಪರಿಕಲ್ಪನೆ ಹೊಂದಿದ್ದರು ಎಂದು ನುಡಿದು ವೇದಗಳು ನಿಸ್ಸಂದೇಹವಾಗಿ ವೈಜ್ಞಾನಿಕ ಸಾಹಿತ್ಯವಾಗಿದೆ ಎಂದು ಉಗ್ಘಡಿಸಿದರು

ವೇದಗಳ ಒಂದು ಭಾಗವಾದ ಬ್ರಾಹ್ಮಣಗಳು ಹಾಗೂ ಮಂತ್ರಗಳ ಅರ್ಥದ ಬಗ್ಗೆ ದೀರ್ಘವಾದ ವಿವರಣೆಯನ್ನು ನೀಡುತ್ತ ಖ್ಯಾತ ವೇದವಿದ್ವಾಂಸ ಶ್ರೀ ರಾಮಾನುಜ ತಾತಾಚಾರ್ಯರು ಧಾರ್ಮಿಕ ಕ್ಷೇತ್ರದಲ್ಲಿ ಸಹಿಷ್ಣುತೆಯನ್ನು ವೇದಗಳು ಬೋಧಿಸುತ್ತವೆ ಎಂದು ತಿಳಿಸಿದರು ಋಷಿಗಳು ಆಳವಾದ ಚಿಂತನೆಯಿಂದ ಇಡೀ ಜಗತ್ತನ್ನು ಒಂದೇ ಘಟಕವಾಗಿ ದರ್ಶಿಸಿದರು ಎನ್ನುತ್ತ ಅವರು ವೇದಗಳಲ್ಲಿ ಅಥರ್ವವೇದ ಅತಿ ಹೆಚ್ಚು ಮಾನವೀಯತೆಯೊಂದಿಗೆ ಕೂಡಿದ್ದು ಅಹಿಂಸೆಯನ್ನು ಪ್ರಸಾರ ಮಾಡಿತು ಎಂದು ಅಭಿಪ್ರಾಯ ಪಟ್ಟರು

ಉಜ್ಜಯಿನಿಯ ವಿಕ್ರಾಂತ ವಿಶ್ವವಿದ್ಯಾಲಯದ

ಾಜೀ ಉಪಕುಲಪತಿ ಪ್ರಾಚಾರ್ಯ ಜಿ ವೆಂಕ
ಚಲಂ ಅವರು ಸಂಸ್ಕಾರಗಳ ಪ್ರಾಮುಖ್ಯತೆ
ನ್ನು ವಿಶೇಷವಾಗಿ ಪುಂಸವನದ ಪ್ರಾಶಸ್ತ್ಯ
ನ್ನು ವಿವರಿಸಿದರು ಷೋಡಶ ಸಂಸ್ಕಾರಗಳು
ಧುನಿಕ ಸಮಾಜಕ್ಕೂ ಅಗತ್ಯವಾದದ್ದರಿಂದ ಅವು
ಗನ್ನು ಸಂರಕ್ಷಿಸಬೇಕಾದ ಅಗತ್ಯವನ್ನು ಅವರು
ತ್ತಿ ಹೇಳಿದರು

ಶ್ರೀ ಕುಪ್ಪುಸ್ವಾಮಿಯವರು ವೈದಿಕ ಸಂಸ್ಕೃತಿ ಡೀ ಜಗತ್ತಿನಲ್ಲಿ ಹರಡಿತ್ತೆಂದು ಹೇಳುತ್ತ ಸಮಾಂತರವಾದ ಪ್ರಾಚೀನ ಸಂಸ್ಕೃತಿಗಳನ್ನು ಉಲ್ಲೇಖಿಸಿ ಮೆಕ್ಸಿಕೋ ಮೊದಲಾದ ದೇಶಗಳಲ್ಲಿ ಅದು ರಡಿದ್ದುದನ್ನು ವಿವರಿಸಿದರು

ಕುಂಭಕೋಣದ ಶ್ರೀ ಎಸ್ ಪಂಚಾಪಕೇಶ ಶಾಸ್ತ್ರಿಗಳು ಭಾರತದಲ್ಲಿ ಸಾಮವೇದಾಧ್ಯಯನ ಪರಿಸ್ಥಿತಿಯನ್ನು ವಿವರಿಸಿ ಶ್ರೀರಂಗದ ಬಳಿಯ ಹಳ್ಳಿಯೊಂದರಲ್ಲಿ ಇಂದಿಗೂ ಅದನ್ನು ಅನುಸರಿಸುತ್ತಿರುವುದಾಗಿ ಉದಾಹರಿಸುತ್ತ ರಾಣಾಯನೀಯ ಶಾಖೆ ಉತ್ತರ ಭಾರತದಲ್ಲಿ ಮಾತ್ರ ಪ್ರಚಲಿತ ವಿರುವುದಾಯೂ ದಕ್ಷಿಣದಲ್ಲಿ ಹಲವರು ಮಾತ್ರವೇ ಇದನ್ನು ಅನುಸರಿಸುತ್ತಿರುವರೆಂದೂ ತಿಳಿಸಿದರು

ದೆಹಲಿಯ ಡಾ|| ಉಷಾಚೌದರಿಯವರು ಅಗ್ನಿ, ಯಜ್ಞ ಪುರೋಹಿತ ಮೊದಲಾದ ಪದಗಳ ಅರ್ಥವನ್ನು ವಿವರಿಸಿ ಅವು ತಾಂತ್ರಿಕ ನಾಭಿಪ್ರಾಯದ ಅರ್ಥಗಳನ್ನು ಮಿಡಿಯುತ್ತಿರುವುದಾಗಿ ತಿಳಿಸುತ್ತ ಸಾಮವೇದವು ಹೃದಯಂಗಮವಾಗಿ ಪ್ರಾಚೀನ ಮುನಿಗಳ ದರ್ಶನವನ್ನು ಪ್ರಕಟಿಸುತ್ತದೆ ಎಂದು ಆಕೆ ಅಭಿಪ್ರಾಯ ಪಟ್ಟರು ಮೊದಲ ಏಳು ಛಂದಸ್ಸುಗಳು ಗಾಯತ್ರಿ ಅನುಷ್ಟುಪ್- ಮೊದಲಾದವು ಸಪ್ತಸ್ವರಗಳನ್ನು ಹೋಲುತ್ತವೆ ಎಂದು ತಿಳಿಸಿದರು



ಅಥರ್ವವೇದದ ಪ್ರಾಮುಖ್ಯವನ್ನು ಡಾ|| ಹುಕುಂಚಂದ್ ಪಾತ್ಯಾಲ್ ಅವರು ವಿವರಿಸಿ ಅದರಲ್ಲಿ ದೊರೆಯುವ ವೈದ್ಯ ಶಾಸ್ತ್ರದ ವಿವಿಧ ಅಂಗಗಳ – ದೇಹರಚನಾಶಾಸ್ತ್ರ ಅಸ್ತ್ರ ಶಾಸ್ತ್ರ ಶಸ್ತ್ರ ಚಿಕಿತ್ಸೆ – ಬಗೆಗಿನ ವಿವರಗಳನ್ನು ತಿಳಿಸಿದರು ಸಂಕ್ಷಿಪ್ತವಾಗಿ ಅಥರ್ವವೇದ ಒಂದು ವಿಶ್ವಕೋಶ ಎಂಬುದು ಅವರ ಅಭಿಪ್ರಾಯ



ವಾರಣಾಸಿಯ ಪ್ರೊ|| ಕಿಶೋರ ಮಿಶ್ರ ಅವರು ಒರಿಸ್ಸದಲ್ಲಿ ಅಥರ್ವವೇದದ ಪಿಪ್ಪಲಾದ ಶಾಖೆಯ ಹಲವು ಕೃತಿಗಳು ದೊರೆತಿದ್ದು ಅವುಗಳನ್ನು ಸಂರಕ್ಷಿಸಿ ಭುವನೇಶ್ವರದಲ್ಲಿನ ಉತ್ಕಲ ವಿಶ್ವವಿದ್ಯಾನಿಲಯದಲ್ಲಿ ಆ ಬಗ್ಗೆ ಪರಿಶೋಧನೆಗಳು ನಡೆಯುತ್ತಿವೆ ಎಂದು ತಿಳಿಸಿದರು

ತಿರುಪತಿಯ ಡಾ|| ರಾಮಚಂದ್ರ ಅರಳಿಕಟ್ಟಿ ಅವರು ಆಧುನಿಕ ಸಮಾಜದಲ್ಲಿ ಅಥರ್ವವೇದದ ಸಾಪೇಕ್ಷತೆಯನ್ನು ವಿವರಿಸಿದರು ಅಥರ್ವವೇದದ ಬಗೆಗಿನ ಕೃತಿಗಳ ಪ್ರಕಟನೆಯನ್ನು ಕುರಿತು ಪ್ರೊ|| ಬಾಹುಲ್ಕರ್ ಅವರು ವಿಮರ್ಶಾತ್ಮಕವಾದ ವಿವರಪಟ್ಟಿಯನ್ನು ನೀಡಿದರು

ತಿ ತಿ ದೇವಸ್ಥಾನಗಳು ವೇದ ಪರಿರಕ್ಷಣೆಯ ಕಾರ್ಯದಲ್ಲಿ ನಡೆಸಿರುವ ಪ್ರಯತ್ನಗಳನ್ನು ಪ್ರೊ|| ಮಂಡನ ಮಿಶ್ರರು ಶ್ಲಾಘಿಸಿದರು

## ಜನವರಿ 31-1-92

ಉಡುಪಿಯ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀ ಪಾದಂಗಳು ವೇದಗಳ




# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ ಮಂಗಳ ಬುಧ ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ | |
|---|---|---|---|
| ಸುಪ್ರಭಾತ | ಪ್ರಾ 5 00 ಪ್ರಾ 5 30 | | ಪ್ರಾ ೫ ೦೦ ಪ್ರಾ 5 30 |
| ವಿಶ್ವರೂಪ ಸರ್ವದರ್ಶನ | ಪ್ರಾ 5 30 ಪ್ರಾ 6 00 | | ಪ್ರಾ ೫ ೩೦ ಪ್ರಾ 6 00 |
| ತೋಮಾಲ ಕೊಲುವು ಪಂಚಾಂಗಶ್ರವಣ | ಪ್ರಾ 6 00 ಪ್ರಾ 6 30 | | ಪ್ರಾ 6 00 ಪ್ರಾ 6 30 |
| ಸಹಸ್ರನಾಮಾರ್ಚನೆ | ಪ್ರಾ 6 30 ಪ್ರಾ 7 00 | | ಪ್ರಾ 6 30 ಪ್ರಾ 7 00 |
| ಮೊದಲನೇ ಗಂಟೆ | ಪ್ರಾ 7 00 ಪ್ರಾ 7 30 | | ಪ್ರಾ 7 00 ಪ್ರಾ 7 30 |
| ಸರ್ವದರ್ಶನ | ಪ್ರಾ 7 30 ಪ್ರಾ 10 00 | *ಅಭಿಷೇಕ | ಪ್ರಾ 7 30 ಪ್ರಾ 8 30 |
| | | ಸಮರ್ಪಣ | ಪ್ರಾ 8 30 ಪ್ರಾ 9 30 |
| 2ನೇ ಅರ್ಚನೆ | | | |
| 2ನೇ ಗಂಟೆ | ಪ್ರಾ 10 00 ಪ್ರಾ 10 30 | | ಪ್ರಾ 9 30 ಪ್ರಾ 10 30 |
| * ಆರ್ಜಿತ | | ಕಲ್ಯಾಣೋತ್ಸವ | ಪ್ರಾ 10 30 ಮ 12 00 |
| ಸರ್ವದರ್ಶನ | ಪ್ರಾ 10 30 ಸಂ 6 30 | | ಪ್ರಾ 10 30 ಸಂ 6 30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6 30 ರಾ 7 00 | | ಸಂ 6 30 ರಾ 7 00 |
| ಸರ್ವದರ್ಶನ | ರಾ 7 00 ರಾ 8 45 | | ರಾ 7 00 ರಾ 8 45 |
| ಏಕಾಂತ ಸೇವೆ | ರಾ 8 45 ರಾ 9 00 | | ರಾ 8 45 ರಾ 9 00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200 00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ 100 00 |
| ಅರ್ಚನೆ (ಒಂದು ವರ್ಷಕ್ಕೆ) | ರೂ 42 00 |
| ಶಾಶ್ವತ ನಿತ್ಯಾರ್ಚನೆ | ರೂ 542 00 |

ವೇದಾಂಗಗಳ ಶಾಸ್ತ್ರಗಳ ಸಂಘಟಿತ ಅಧ್ಯಯನದ ಅಗತ್ಯವನ್ನು ಒತ್ತಿ ಹೇಳುತ್ತ ಸರಕಾರಗಳು ವನ್ಯ ಪ್ರಾಣಿಗಳನ್ನು ಪರಿರಕ್ಷಿಸುವಂತೆ ನೋಡಿಕೊಳ್ಳುವಂತೆ ಸಿಂಹಸದೃಶರಾದ ವೈದಿಕ ವಿದ್ವಾಂಸರೂ ಪರಿಕಕ್ಷಣೆಯನ್ನು ಅಪೇಕ್ಷಿಸುತ್ತಾರೆ ದೇಹವಿಲ್ಲದೆ ಆತ್ಮ ಹೇಗೆ ಇರಲಾರದೊ ಹಾಗೆಯೇ ಜನತೆಯ ಅಭಿಮಾನ ಆದರವಿಲ್ಲದೆ ವೇದಗಳೂ ಇರಲಾರವು ಎಂದು ಶ್ರೀಪಾದರು ನುಡಿದರು

ತಮ್ಮ ಅಧ್ಯಕ್ಷ ಭಾಷಣದಲ್ಲಿ ಮಹಾಮಹೋಪಾಧ್ಯಾಯ ಶ್ರೀ ಪೇರಿ ಸೂರ್ಯನಾರಾಯಣ ಶಾಸ್ತ್ರಿಗಳು ಆರು ವೇದಾಂಗಗಳನ್ನು ಶಿಕ್ಷಾ, ವ್ಯಾಕರಣ ಛಂದಸ್ಸು ಜ್ಯೋತಿಷ್ಯ, ಮೊದಲಾದವು - ವೇದ ಪಾದಗಳು ಎಂದು ಅಭಿಪ್ರಾಯ ಪಡುತ್ತ ಈ ವೈದಿಕ ಷಡಂಗಗಳ ಸೂಕ್ತ ಅಧ್ಯಯನವಿಲ್ಲದೆ ವೇದಗಳನ್ನು ಸರಿಯಾಗಿ ಪೂರ್ಣವಾಗಿ ಅರ್ಥ ಮಾಡಿಕೊಳ್ಳುವುದಕ್ಕೆ ಸಾಧ್ಯವಿಲ್ಲ ಎನ್ನುತ್ತ ಇವುಗಳ ಪ್ರಾಧಾನ್ಯವನ್ನು ವಿವರಿಸಿದರು

ಪ್ರೊ|| ಪಿ ರಾಮಚಂದ್ರುಡು ಅವರು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಯಾವುದೇ ಯಂತ್ರದ ನೆರವೂ ಇಲ್ಲದೆ ಪ್ರಾಚೀನ ಕಾಲದಲ್ಲಿ ವೈದಿಕ ಋಷಿಗಳು ಅತ್ಯುನ್ನತ ತಾಂತ್ರಿಕತೆಯಿಂದ ಕೂಡಿದ ಧ್ವನಿಶಾಸ್ತ್ರವನ್ನು ಗ್ರಹಿಸಿದ್ದರು ಎನ್ನುತ್ತ ಕಂಪ್ಯೂಟರಿಗೆ ಸಂಸ್ಕೃತವೇ ಅತಿ ಹೆಚ್ಚು ಸೂಕ್ತವಾದ ಭಾಷೆ ಎಂದು ದನಿಗೂಡಿಸಿದರು ವೇದಗಳನ್ನು ಶುಕ್ಲ ಪಕ್ಷದಲ್ಲೂ ವೇದಾಂಗಗಳನ್ನು ಕೃಷ್ಣ ಪಕ್ಷದಲ್ಲೂ ಅಧ್ಯಯನ ನಡೆಯುತ್ತಿತ್ತೆಂಬ ಪರಂಪರೆಯನ್ನೂ ವ್ಯಾಕರಣವನ್ನು ಮೊದಲು ಓದಿ ನಂತರ ವೇದಾಧ್ಯಯನ ಮಾಡುವ ಪರಂಪರೆಯನ್ನೂ, ನೆನೆಯುತ್ತ ವೇದಗಳ ವಿವಿಧ ಶಾಖೆಗಳಲ್ಲಿನ ಉಚ್ಚಾರಣ ವೈವಿಧ್ಯದಿಂದಾಗಿ ವೇದಾಂಗಗಳ ಅಧ್ಯಯನ ಅತ್ಯಗತ್ಯವೆಂದರು ವೇದಾಂಗಗಳ ಅಧ್ಯಯನದಲ್ಲಿ ಆಸಕ್ತಿ ಸಾಕಷ್ಟು ಇಲ್ಲದಿರುವುದಕ್ಕಾಗಿ ವಿಷಾದಿಸಿದರು

ದೆಹಲಿಯ ಪ್ರಾಚಾರ್ಯ ಡಾ|| ಸಿ ಆರ್ ಸ್ವಾಮಿನಾಥನ್ ಅವರು ವೈದಿಕ ವಿಷಯಗಳನ್ನು ನವೋದಯ ಶಾಲೆಗಳೂ ಕೇಂದ್ರೀಯ ವಿದ್ಯಾಪೀಠಗಳು ತಮ್ಮ ಪಠ್ಯ ವಿಷಯಗಳಲ್ಲಿ ಸೇರಿಸಿಕೊಳ್ಳಬೇಕೆಂದು ಸಲಹೆ ನೀಡಿದರು ಪಂಜಾಬು, ಹಿಮಾಚಲಪ್ರದೇಶ, ಅಸ್ಸಾಂ ಮೊದಲಾದ ಗಡಿ ಪ್ರದೇಶಗಳಲ್ಲಿ ವೈದಿಕ ಅಧ್ಯಯನಾಸಕ್ತಿ ಇಳಿಮುಖವಾಗುತ್ತಿರುವುದನ್ನು ಸಭೆಗೆ ತಿಳಿಸುತ್ತ ಈ ಪ್ರಾಂತಗಳಿಗೆ ವೈದಿಕ ವಿದ್ವಾಂಸರನ್ನು ಕಳುಹಿಸಿ

ಯ್ದು ವಿದ್ಯಾರ್ಥಿಗಳಿಗೆ ವೇದಗಳಲ್ಲಿ ಶಿಕ್ಷಣ ಕೊಡಿಬೇಕು ಎಂದರು

ಶಿಕ್ಷಾಶಾಸ್ತ್ರದ ಅಪ್ರಕಟಿತ ಕೃತಿಗಳನ್ನು ಹೊರ ರಲು ಡಾ|| ವೇದುಲ ಸುಬ್ರಹ್ಮಣ್ಯಂ ಅವರು ಪ್ರಾರ್ಥಿಸಿದರು ಉಚ್ಚಾರಣಾ ಶಾಸ್ತ್ರದಲ್ಲಿ ತಜ್ಞ ರಾದ ಭಾಷಾ ಶಾಸ್ತ್ರಜ್ಞರಿಗೆ ಇದರಿಂದ ಅಮೂ ಲ್ಯವಾದ ನೆರವು ಸಿಗುತ್ತದೆ ಎಂದರು ಡಾ|| ಬಿ ಆರ್ ಮೋದಕ್ ಅವರು ವೈದಿಕ ಜೋತಿಷ್ಯ ಶಾಸ್ತ್ರದ ಬಗ್ಗೆ ದೀರ್ಘವಿವರಣೆ ನೀಡಿದರು

ಶ್ರೀ ಎಸ್ ಆರ್ ರಘೋತ್ತಮಾಚಾರ್ಯ ಶ್ರೀ ಆರ್ ಕೃಷ್ಣಮಾಚಾರ್ಯ ಶ್ರೀ ಶ್ರೀಪಾದ ಲಕ್ಷ್ಮೀನಾರಾಯಣ ಶ್ರೀ ಇ ಎಸ್ ವರದಾಚಾರಿ ಶ್ರೀ ವಿ ವಿ ಸೀತಾರಾಮಾಚಾರ್ಯುಲು ಶ್ರೀ ಎಂ ವೆಂಕಟಶಾಸ್ತ್ರಿ ಶ್ರೀ ಜಿ ಶ್ರೀರಾಮುಲು ಮತ್ತಿತರರು ಹಲವು ವಿಷಯಗಳ ಬಗ್ಗೆ ಮಾತನಾಡಿದರು

ಮಧ್ಯಾಹ್ನದ ಗೋಷ್ಠಿಯಲ್ಲಿ ಕಂಚಿಯ ಕಾಮ ಕೋಟಿ ಪೀಠದ ಶ್ರೀ ಶ್ರೀ ಜಯೇಂದ್ರ ಸರಸ್ವತಿಯವರು ದೇಶಾದ್ಯಂತ ನಡೆದಿರುವ ವೈದಿಕ ಅಧ್ಯಯನದ ವಿವರಗಳನ್ನು ತಿಳಿಯಬಯಸಿದರು ವೇದಗಳ ಅಧ್ಯಯನದಲ್ಲಿ ತೊಡಗಿರುವ ಉಪಾಧ್ಯಾಯರು, ವಿದ್ಯಾರ್ಥಿಗಳು ಮತ್ತಿತರರ ಸಮಸ್ಯೆಗಳಾವುವು ಎಂಬುದನ್ನು ತಿಳಿದು ಅವುಗಳ ಪರಿಷ್ಕಾರ ಮಾಡಬೇಕೆಂದು ಕರೆನೀಡಿದರು

ಪೂನಾದ ಡಾ|| ಸರೋಜ ಭಾಟೆಯವರು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಪ್ರಾಚೀನ ವೈದಿಕ ಜ್ಞಾನವು ನಮ್ಮ ಸಾಮಾನ್ಯ ಪರಂಪರೆಯಾಗಿರುವುದರಿಂದ ಇವುಗಳ ರಕ್ಷಣೆ ಆದ್ಯ ಕರ್ತವ್ಯ ಎಂಬುದಾಗಿ ಒತ್ತಿ ಹೇಳುತ್ತ ವೇದಾಂಗಗಳ ಆಳವಾದ ಅಧ್ಯಯನ ನಡೆಯಬೇಕೆಂದೂ ಅವುಗಳ ಧ್ವನಿ ಸುರುಳಿಗಳನ್ನು ಮಾಡಿ ಧ್ವನಿಸುರುಳಿ ಭಂಡಾರಗಳಲ್ಲಿ ಇಡುವುದರಿಂದ ಮಾತ್ರವೇ ಅಪೇಕ್ಷಿತ ಪ್ರಯೋಜನ ಕೈಗೂಡದು ಎಂದು ತಿಳಿಸಿದರು

ಪ್ರಾಚಾಯ ಎಂ ಸೂರ್ಯನಾರಾಯಣ ಮೂರ್ತಿಯವರು ತಮ್ಮ ನಿರ್ದೇಶನದ ಪ್ರಾಚ್ಯ ಪರಿಶೋಧನಾ ಸಂಸ್ಥೆ ಮಹಾಭಾಷ್ಯಕೋಶ ಸಂಕಲನವನ್ನು ಹೊರ ತರಬೇಕೆಂದು ಸಲಹೆ ನೀಡುತ್ತದೆ ಎಂದರು ಜ್ಯೋತಿಷ್ಯ ಶಾಸ್ತ್ರದಲ್ಲಿ ಪ್ರಖ್ಯಾತ ವಿದ್ವಾಂಸರಾದ ಶ್ರೀ ಹನುಮಯ್ಯನವರು ಜ್ಯೋತಿಷ್ಯ ಶಾಸ್ತ್ರದ ಪ್ರಾಧಾನ್ಯವನ್ನು ವಿರವಾಗಿ ಚಿತ್ರಿಸಿದರು ತಿರುಪತಿಯ ಸಂಸ್ಕೃತ ವಿಶ್ವವಿದ್ಯಾಲಯದ ಡಾ|| ಕೆ ವಿ ರಾಮಕೃಷ್ಣಾಚಾರ್ಯರು ಸಂಸ್ಕೃತ ವ್ಯಾಕರಣವನ್ನು ಹೇಗೆ ಕಂಪ್ಯೂಟರೀಕರಿಸಬಹುದೆಂಬುದನ್ನು ವಿವರಿಸಿದರು




## ಫೆಬ್ರವರಿ 1 – 1992

ತೋರಿಕೆಗೆ ಕಂಡು ಬರಬಹುದಾದ ವೈರುಧ್ಯಗಳನ್ನು ನಿವಾರಿಸಲು ಮೀಮಾಂಸೆ ಹಾಗೂ ಇತರ ದರ್ಶನ ಶಾಸ್ತ್ರಗಳ ಸಮರ್ಪಕ ಅರ್ಥವಿವರಣೆಯ ಅಗತ್ಯವನ್ನು ಖ್ಯಾತ ವೇದ ವಿದ್ವಾಂಸರಾದ ರೇಮಿಳ್ಳಸೂರ್ಯಪ್ರಕಾಶ ಶಾಸ್ತ್ರಿಯವರು ಅವಧಾರಿಸಿ ಹೇಳಿದರು ವೇದಗಳನ್ನು ಸರಿಯಾಗಿ ಶಾಸ್ತ್ರಗಳನೆರವಿನಿಂದ ಅರ್ಥೈಸುವಿಕೆಯ ಮೂಲಕ ವಿಶ್ವಶಾಂತಿ ಸಾಧ್ಯವೆಂದು ಅವರು ಅಭಿಪ್ರಾಯಪಟ್ಟರು ಮೀಮಾಂಸೆಯ ಸರಿಯಾದ ಅಧ್ಯಯನದಿಂದ ವೇದಗಳ ಆಳವನ್ನು ತಿಳಿಯಬಹುದೆಂದು ಅವರು ತಿಳಿಸಿದರು

ಪ್ರಾಸ್ತಾವಿಕ ಭಾಷಣವನ್ನು ಮಾಡುತ್ತ ಪ್ರಖ್ಯಾತ ವಿದ್ವಾಂಸರಾದ ಬೆಂಗಳೂರಿನ ಪ್ರಾಚಾರ್ಯ ಶ್ರೀ ಕೆ ಟಿ ಪಾಂಡುರಂಗಿ ಅವರು ದೇಶದ ಸಾಂಸ್ಕೃತಿಕ ಏಕತೆ ಹಾಗೂ ಭಾವೈಕ್ಯಗಳನ್ನು ಸಾಧಿಸುವಲ್ಲಿ ಸಂಸ್ಕೃತದ ಪಾತ್ರ ಪ್ರಮುಖವೆಂದರು ನಮ್ಮ ವೇದಗಳ ಶಿಕ್ಷಣದಲ್ಲಿನ ಭೌಗೋಳಿಕ ವಿತರಣೆಯ ಪಕ್ಷಿನೋಟ ಮಾತ್ರದಿಂದಲೇ ಇಡೀ ಭಾರತದಲ್ಲಿ ಹರಡಿದ ಬೌದ್ಧಿಕ ಸಾಂಸ್ಕೃತಿಕ ಏಕತೆಯನ್ನು ಗುರುತಿಸಬಹುದು ಎಂದು ತಿಳಿಸಿದರು

ಅಂದಿನ ದಿನಗಳಲ್ಲಿ – ಯಾವುದೇ ರೀತಿಯ ಸಾರಿಗೆ ಯಂತ್ರದ ನೆರವೂ ಇಲ್ಲದ ದಿವಸಗಳಲ್ಲಿ – ದೇಶದ ಯಾವುದೋ ಒಂದು ಮೂಲೆಯ ವ್ಯಾಖ್ಯಾನಕಾರನನ್ನು ಒಂದು ಶಾಸ್ತ್ರ ಹೇಗೆ ಆಕರ್ಷಿಸಿದ್ದಿರಬೇಕು ಎಂದು ಆಶ್ಚರ್ಯವನ್ನು ಸೂಚಿಸುತ್ತ ತಿರುಪತಿಯಲ್ಲಿ ಒಂದು ಪರಿಶೋಧನಾ ಸಮಾಚಾರ ಕೇಂದ್ರದ ಸ್ಥಾಪನೆಗೆ ಹಾಗೂ ರಾಷ್ಟ್ರೀಯ ಹಸ್ತಪ್ರತಿ ಸಂಗ್ರಹ ಭಂಡಾರ ಸ್ಥಾಪನೆಗೆ ಸಲಹೆ ನೀಡಿದರು

ಮೇಲುಕೋಟೆಯ ಪೀಠಾಧಿಪತಿಗಳು ತಿ ತಿ ದೇಗಳು ವೇದಗಳ ಪರಿರಕ್ಷಣೆ ಪ್ರಾಚುರ್ಯಗಳಿಗಾಗಿ ಒಂದು ವಿಶೇಷ ಧರ್ಮದರ್ಶಿ ಮಂಡಳಿಯನ್ನು ಸ್ಥಾಪಿಸಬೇಕೆಂದು ತಿಳಿಸಿದರು ಸ್ವಾಮಿಗಳು ದೂರದರ್ಶನದಲ್ಲಿ ವೇದಗಳ ಆಧಾರದ ಕಾರ್ಯಕ್ರಮಗಳನ್ನು ಪ್ರಾಯೋಜಿಸುವಂತೆಯೂ ಕರೆನೀಡಿದರು ಬಾನುಲಿಯನ್ನೂ ವೇದಗಳ ಪ್ರಚಾರಕ್ಕಾಗಿ ಬಳಸಬೇಕೆಂದರು

ಶ್ರೀ ಸಾಮಾನ್ಯರ ಪ್ರಯೋಜನಕ್ಕಾಗಿ ವೇದಗಳಲ್ಲಿನ ಮೂಲತತ್ವಗಳನ್ನು ಮಾಜೀ ಮುಜರಾಯಿ ಇಲಾಖಾ ಕಮಿಷನರ್ ಶ್ರೀ ಪಿ ಎಲ್ ಶ್ರೀನಿವಾಸ ಅವರು ವಿವರಿಸಿದರು

ಶ್ರೀ ಶ್ರೀಪಾದ ಸುಬ್ರಹ್ಮಣ್ಯ ಘನಪಾಠಿಗಳು ವೇದಗಳ ಘನ ಹಾಗೂ ಪ್ರತಿಲೋಮ ಪಾಠಗಳ ಪ್ರಾಯೋಗಿಕವನ್ನು ನೀಡಿದರು ಶ್ರೀಮತಿ

ಗೋದಾ ಸುಬ್ರಹ್ಮಣ್ಯಶಾಸ್ತ್ರಿ ಶ್ರೀ ಸನ್ನಿಧಾನಂ ಲಕ್ಷ್ಮೀನಾರಾಯಣ ಶಾಸ್ತ್ರಿ ಶ್ರೀ ಡಿ ಎಸ್ ಶಾನ ಭಾಗ ಶ್ರೀರಾವಿ ನರಸಿಂಹ ಶಾಸ್ತ್ರಿ ಶ್ರೀ ಎಸ್ ಸಿ ಚಕ್ರವರ್ತಿ ಶ್ರೀ ಎಂ ಜಿ ವನೋವ ಹಾಗೂ ಶ್ರೀ ವಿ ಗೋಪಾಲಕೃಷ್ಣ ಅವರುಗಳು ವೇದಗಳ ವಿವಿಧ ಶಾಖಗಳ ವೇರೆ ಬೇರೆ ಮುಖಗಳ ಬಗ್ಗೆ ಮಾತನಾಡಿದರು

ಮಧ್ಯಾಹ್ನದ ಗೋಷ್ಠಿಯಲ್ಲಿ ಪ್ರಾಚಾರ್ಯ ಪಿ ಶ್ರೀರಾಮಮೂರ್ತಿಯವರು ತಮ್ಮ ಅಧ್ಯಕ್ಷ ಭಾಷ ಣಗಳಲ್ಲಿ ತಿ ತಿ ದೇವಸ್ಥಾನಗಳು ಶಾಸ್ತ್ರಗ್ರಂಥಗಳ ಪ್ರಕಟನೆಯಲ್ಲಿನ ಪ್ರಯತ್ನವನ್ನು ತೀವ್ರಗೊಳಿಸಬೇಕೆಂದು ಕರೆ ನೀಡಿದರು ವೈದಿಕ ವಿದ್ವಾಂಸರ ಪರಸ್ಪರ ವಿಚಾರ ವಿನಿಮಯಗಳಿಗೂ ಅವರು ಕರೆ ನೀಡಿದರು ಜನಪ್ರಿಯ ಜಾನಪದ ತತ್ವಗಳು ವೇದಗಳ ಪರಂಪರೆಯಲ್ಲಿ ಸೇರಿದ ಬಗೆಯ ಕುರಿತು ಅಧ್ಯಯನದ ಅಗತ್ಯವನ್ನು ಅವಧಾರಿಸಿದರು

ಪೂನಾದ ವಿ ಎಸ್ ಝಘು ಅವರು ತಮ್ಮ ಪ್ರಾಸ್ತಾವಿಕ ಭಾವಣದಲ್ಲಿ ನಮ್ಮ ಪ್ರಾಚೀನ ಸಂಸ್ಕೃತ ವರ್ಗಗಳನ್ನು ಪುನ ಇಂದಿನ ಕಾಲಕ್ಕೆ ತಕ್ಕಂತೆ ಅರ್ಥೈಸುವ ಸ್ಥಿತಿ ಆಸನ್ನವಾಗಿದೆಯೆಂದು ತಿಳಿಸಿದರು ವಿಜ್ಞಾನ ಹಾಗೂ ತಂತ್ರಜ್ಞಾನಗಳಲ್ಲಿ ಅಗಾಧ ಬೆಳವಣಿಗೆಯ ದೃಷ್ಟಿಯಿಂದ ಇದರ ತುರ್ತು ಹೆಚ್ಚಾಗಿದೆ ಎಂದರು

ಡಾ|| ಎಂ ವೆಂಕಟರೆಡ್ಡಿಯವರು ಯೌಗಿಕ ಸಂಸ್ಕೃತಿಯ ಪ್ರಚಾರಕ್ಕೆ ಒತ್ತು ನೀಡಬೇಕೆಂದರು ಯೋಗವನ್ನು ಶ್ರೀ ಸಾಮಾನ್ಯನೆಡೆಗೆ ಕೊಂಡೊಯ್ಯಲು ಯೋಗದ ಪ್ರಚಾರ ರಥಗಳನ್ನು ನಡೆಸಬೇಕೆಂದರು

ತಿ ತಿ ದೇ ಗಳು ಈ ವರೆಗೆ ಮಾಡಿರುವ ವೇದಗಳ ಧ್ವನಿಸುರುಳಿಯ ಕೆಲಸದ ವಿವರಗಳನ್ನು ಡಾ|| ಟಿ ವಿ ರಾಘವಾಚಾರ್ಯುಲು ಅವರು ನೀಡಿದರು ಶ್ರೀ ಎಸ್ ಶಂಕರನಾರಾಯಣನ್ ಶ್ರೀ ಪಿ ರಾಮಾನುಜಂ ಶ್ರೀ ಆರ್ ಕೋಟೇಶ್ವರ ಶರ್ಮ ಅವರುಗಳೂ ಮಾತನಾಡಿದರು, ವಿವಿಧ ಶಾಸ್ತ್ರಗಳ ಬಗ್ಗೆ

## ಫೆಬ್ರವರಿ 2, 1992

ಪಾಂಡಿಚೇರಿಯ ಫ್ರೆಂಚ್ ಇನ್‌ಸ್ಟಿಟ್ಯೂಟ್ ಆಫ್ ಇಂಡಾಲಜಿಯ ಪ್ರೊ|| ವಿ ವರದಾಚಾರಿ ಅವರು ಆಗಮಗಳು ವೇದಗಳಷ್ಟೇ ಹಳೆಯವು ಎಂದೂ ಅವು ಜೀವನದಲ್ಲಿನ ಐಹಿಕ ಆಧ್ಯಾತ್ಮಿಕ ಮುಖಗಳೆಲ್ಲವನ್ನೂ ಒಳಗೊಂಡಿವೆಯೆಂದೂ ಅಭಿಪ್ರಾಯಪಟ್ಟರು

ಆಗಮ ಶಾಸ್ತ್ರ ಸದಸ್ಸಿನ ಅಧ್ಯಕ್ಷಪೀಠದಿಂದ ಮಾತನಾಡುತ್ತಿದ್ದ ಅವರು ವೇದಗಳಲ್ಲಿ ವಿವರಪೂರ್ಣವಾಗಿ ಕಂಡುಬರದ ವಿಷಯಗಳನ್ನು ಆಗಮಗಳಲ್ಲಿ ವಿವರಿಸಲಾಗಿದೆಯೆಂದೂ ಭಾರತೀಯ ಸಂಸ್ಕೃತಿಯ ಎಲ್ಲ ಅಂಗಗಳನ್ನು ತಿಳಿಯಲು, ಮಹಾಕಾವ್ಯಗಳು ಪುರಾಣಗಳು ನೆರವು ನೀಡುತ್ತವೆ ಎಂದರು ಆಗಮಗಳೊಂದಿಗೆ ನೃತ್ಯಸಂಗೀತ ಮೊದಲಾದ ಎಲ್ಲ ಕಲೆಗಳೂ ಹತ್ತಿರದ ಸಂಬಂಧ ಪಡೆದಿವೆಯೆಂದೂ ವೈಖಾನಸ ಪಾಂಚರಾತ್ರ ಆಗಮಗಳು ದೇವಾಲಯ ನಿರ್ಮಾಣ ಪೂಜಾವಿಧಿಗಳ ವಿವರಣೆಯಾಗಿವೆಯೆಂದರು

ದೇವಾಲಯದ ಆರಾಧನಾ ಪದ್ಧತಿಯಲ್ಲಿ ಆಗಮಗಳನ್ನು ಅತಿ ಪ್ರಮುಖವೆಂದು ಭಾವಿಸಲಾಗಿದೆ ಎಂದು ತಿಳಿಸುತ್ತ ತಿರುಪತಿಯ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ಮಾಜಿ ಪ್ರಾಂಶುಪಾಲ ಡಾ|| ಎಂ ಡಿ ಬಾಲಸುಬ್ರಹ್ಮಣ್ಯಂ ಅವರು ಆರಾಧನಾ ವಿಧಿಗಳನ್ನು ಆಗಮಗಳು ವ್ಯವಸ್ಥೀಕರಣಗೊಳಿಸಿದವೆಂದೂ, ಅರ್ಥಪೂರ್ಣಗೊಳಿಸಿದವೆಂದೂ ತಿಳಿಸುತ್ತ ಅಪ್ರಕಟಿತ ಅನೇಕ ಆಗಮಗಳು ಬೆಳಕು ಕಾಣಬೇಕಾದ್ದು ಅಗತ್ಯವೆಂದರು

ಕೋವೂರಿನ ಡಾ|| ಶ್ರೀನಿವಾಸ ದೀಕ್ಷಿತುಲು ಅವರು ಆಗಮ ಪದ್ಧತಿಯ ಪರಿರಕ್ಷಣೆ ಪ್ರಚಾರಕ್ಕೆ ಕರೆನೀಡುತ್ತ, ಆಗಮಗಳ ಅಧ್ಯಯನಕ್ಕೆ ಹೆಚ್ಚಿನ ಪಾಠಶಾಲೆಗಳು ಉಂಟಾಗುವ ಅಗತ್ಯವನ್ನು ಅವಧಾರಿಸಿದರು

ಶ್ರೀ ಬಿ ವಿ ಎಸ್ ಮಣಿಯವರು ವೈದಿಕ ಮತ್ತು ಶಾಸ್ತ್ರೀಯ ಸಂಸ್ಕೃತಿಯ ಬೆಳವಣಿಗೆಗಾಗಿ ಮಾರ್ಗ ರೀತಿಗಳನ್ನು ಸೂಚಿಸಿದರು ಡಾ|| ಎಸ್ ಬಿ ಎಸ್ ಭಟ್ಟಾಚಾರ್ಯರು ಈ ದಿಸೆಯಲ್ಲಿ ನಡೆಧಿರುವ ಪಾಶ್ಚಾತ್ಯ ಪೌರಾತ್ಯ ಪರಿಶೋಧನಾ ವಿವರಗಳನ್ನು ನೀಡಿಧರು ವೇದಗಳ ಶಾಸ್ತ್ರಗಳ ತುಲನಾತ್ಮಕ ವಿಮರ್ಶಾತ್ಮಕ ಸಂಪಾದನೆ ಮಾಡುವಲ್ಲಿ ವಿವಿಧ ವಿದ್ವಾಂಸರ ಕೊಡುಗೆಗಳನ್ನು ಅವರು ವಿವರಿಸಿದರು

ಪಾಂಚರಾತ್ರಗಳ ಬಗ್ಗೆ ಉಪಲಬ್ಧವಿರುವ ಸಾಹಿತ್ಯವನ್ನು ಪಟ್ಟಿ ಮಾಡಿದ ಶ್ರೀ ಜ ಜ ವಿ ಆರ್ ರಾಮಾನುಜಾಚಾರ್ಯುಲು ಅವರು ದೇವಾಲಯ

ಧಿಗಳ ಕ್ರಮ ಸಾಹಿತ್ಯವನ್ನು ಪ್ರಕಟಿಸಿ ಆಲಯ ಸಾಧನಾ ಪದ್ಧತಿಯನ್ನು ಸುಲಭಗೊಳಿಸಿ ಪರಿ ಣಾಮಕಾರಿಯಾಗಿಸಬೇಕು ಎಂದು ಕರೆನೀಡಿದರು

ಭೃಗು ಅತ್ರಿ ಕಶ್ಯಪ ಮರೀಚಿ ಮೊದಲಾದ ಪ್ರಾಚೀನ ಋಷಿಗಳು ರಚಿಸಿದ ವೈಖಾನಸ ಆಗ ಮದ ಗ್ರಂಥಗಳ ಅನುಪಲಬ್ಧಿಯನ್ನು ಪ್ರಾಸ್ತಾಪಿ ಸ ಶ್ರೀ ಆರ್ ಶ್ರೀನಿವಾಸಾಚಾರ್ಯುಲು ಅವು ಗಳನ್ನು ಪ್ರಕಟಿಸಬೇಕೆಂದು ಕರೆ ನೀಡಿದರು

ವ್ಯಾಪಕವೂ ವೈವಿಧ್ಯಮಯವೂ ಆದ ಶೈವಾ ಗಮಗಳ ಪ್ರಕಟನೆಯ ಅಗತ್ಯವನ್ನು ಕುರಿತು ಪ್ರಾಚಾರ್ಯ ಎಂ ಕುಮಾರಸ್ವಾಮಿ ಅವರು ಅವ ಧರಿಸಿದರು ತಿ ತಿ ದೇವಸ್ಥಾನಗಳೇ ಈ ವಿಸ್ತೃತ ಕಾರ್ಯಮಾಡಲು ಸಾಧ್ಯವೆಂದರು

ಶ್ರೀ ಕಾಮೇಶ್ವರನ್ ಅವರು ಶ್ರೀ ಸಾಮಾನ್ಯನ ಪ್ರಯೋಜನಕ್ಕಾಗಿ ಎಲ್ಲ ಸ್ತೋತ್ರಗಳನ್ನೂ ಪ್ರಕಟಿ ಸಬೇಕೆಂದರು

ತಮ್ಮ ಆ ಶೀ ರ್ವಾ ದ ವ ನ್ನು ನೀ ಡುತ್ತ ಯೇರ್ವೇಡು ವ್ಯಾಸಾಶ್ರಮದ ಶ್ರೀ ಶ್ರೀ ವಿದ್ಯಾನಂದಗಿರಿಯವರು ಎಲ್ಲ ಜನರೂ ಅಹಂಕಾರ ನಿರ್ಮೂಲ ಮಾಡಿಕೊಂಡು ಸರ್ವವ್ಯಾಪಿ ಬ್ರಹ್ಮ ವನ್ನು ಅರಿಯುವ ಪ್ರಯತ್ನ ಮಾಡಬೇಕೆಂದೂ ಅದರಿಂದ ಖಂಡಿತವಾಗಿ ಜೀವನದಲ್ಲಿ ಶಾಂತಿ ನಿಮತೆಗಳ ಸಾಧನೆ ಆಗುವುದೆಂದೂ ನುಡಿದರು



ಸಂಜೆ ನಡೆದ ವಿಚಾರಗೋಷ್ಠಿಯಲ್ಲಿ ಪ್ರೊ|| ಎಂ ನರಸಿಂಹಾಚಾರ್ಯರು ಇಂದು ದೇವಾಲ ಯಗಳು ದೇಶದ ಏಕತೆಯಲ್ಲಿ ನೆರವು ನೀಡುತ್ತಿದೆ ಇಲ್ಲಿ ತಿರುಮಲೆಯ ದೇವಾಲಯವನ್ನು ಉದಾಹ ರಣೆಯಾಗಿ ನೀಡಿದರು ಆಗಮಗಳ ಬಗ್ಗೆ ಜನ ರಲ್ಲಿ ಅರಿವನ್ನುಂಟುಮಾಡಲು ತೆಗೆದುಕೊಳ್ಳಬೇ ಕಾದ ಕ್ರಮಗಳನ್ನು ಅವರು ವಿವರಿಸಿದರು

ಪ್ರಾಸ್ತಾವಿಕ ಭಾಷಣವನ್ನು ಮಾಡುತ್ತ ಮೇಲು ಕೋಟೆಯ ಪ್ರಾಚಾರ್ಯ ಎಂ ಎ ಲಕ್ಷ್ಮೀ ತಾತಾ ಚಾರ್ಯರು ಆಗಮಗಳು ಯೋಗ ಹಾಗೂ ಮಂತ್ರ ಶಾಸ್ತ್ರಗಳ ನಡುವಣ ಸಂಬಂಧಗಳ ವಿಶ್ಲೇಷಣೆಯ ಅಗತ್ಯದತ್ತ ಗಮನ ಸೆಳೆದರು ನಂಬಿಕೆಯಿಲ್ಲದ ವರಿಗೆ ದೇವಾಲಯದಲ್ಲಿನ ಆರಾಧನೆ ಮತ್ತಿತರ ವಿಧಿಗಳಲ್ಲಿ ಸಮಾಧಾನಗೊಳಿಸಲು ಅವರನ್ನು ಸೆಳೆಯಲು ತಕ್ಕ ವೈಜ್ಞಾನಿಕ ಸಂಶೋಧನೆಗಳನ್ನು ಪ್ರೋತ್ಸಾಹಿಸಬೇಕೆಂದು ಕರೆನೀಡಿದರು



ಶ್ರೀ ಸಿ ವಿ ಸೀತಾರಾಮಾಚಾರ್ಯರು ಆಗಮ ಪರಂಪರೆಯನ್ನು ರಕ್ಷಿಸಲು ಮಾರ್ಗಗಳನ್ನು ಸೂಚಿಸಿದರು, ಶ್ರೀ ಎಸ್ ವಿ ರಾಮಾನುಜಾ ಚಾರ್ಯರು ಭಾರತೀಯ ಸಂಸ್ಕೃತಿಯು ದೇವಾ ಲಯ ಆರಾಧನಾ ಪದ್ಧತಿಯೊಡನೆ ಅವಿನಾಭಾವಿ ಸಂಬಂಧ ಹೊಂದಿದೆಯೆಂದರು

ಮೂರೂ ಆಗಮಗಳ ಪಾರಂಪರಿಕ ಅಧ್ಯಯ ನದ ಅಗತ್ಯವನ್ನು ಕುರಿತು ಡಾ|| ವಿ ರಾಮಾ ನುಜಾಚಾರ್ಯ ಅವರು ಮಾತನಾಡಿದರು ಆಧು ನಿಕ ವಿಧಾನಗಳಲ್ಲಿ ಸಂಶೋಧನೆಗಳನ್ನು ಕೈಗೆತ್ತಿಕೊ ಳ್ಳುವ ಅಗತ್ಯವನ್ನು ಪ್ರಾಚಾರ್ಯ ಕೆ ಕೆ ಎ ವೆಂಕ ಟಾಚಾರ್ಯ ಅವರು ಒತ್ತಿ ಹೇಳಿದರು ಈಗ ಉಪಲಬ್ಧವಿರುವ ಆಗಮ ಸಾಹಿತ್ಯ ಹಿಂದಿನ ವರುಷಗಳಲ್ಲಿ ಹಲವಾರು ತೆರದಲ್ಲಿ ಪರಿವರ್ತನೆ ಹೊಂದಿವೆಯೆಂದೂ, ಅವುಗಳ ವೈಜ್ಞಾನಿಕ ಅಧ್ಯ ಯನದಿಂದ ತಮ್ಮದೇ ಆದ ಪರಂಪರೆಯ ಕೊಡು ಗೆಗಳನ್ನು ಇತರ ಪರಂಪರೆಗಳೊಡನೆ ಹೋಲಿಸಿ

ನೋಡಲು ಅನುಕೂಲವಾಗುವುದೆಂದರು ಇದರಿಂದಾಗಿ ಜನ ಶಾಂತಿ ಸಹಿಷ್ಣುತೆಗಳಿಂದ ಬಾಳಲು ಅನುಕೂಲವೆಂದು ಅವರು ಫಲಶ್ರುತಿಯಾಡಿದರು

ಶ್ರೀ ಕೆವಿ ರಾಘವಾಚಾರ್ಯರು **ದೇವಾಲ**ಯದ ಆರಾಧನಾ ಪದ್ಧತಿಯ ಹಲವು ವಿಧಿಗಳನ್ನು ವಿವರಿಸಿ ಅವುಗಳ ಅರ್ಥ ಮತ್ತು ಮಹತ್ವಗಳನ್ನು ವಿವರಿಸಿದರು ಆಲಯಾರಾಧನಾ ಪದ್ಧತಿಯ ಮೌಲ್ಯಗಳ ಪ್ರಚಾರದ ಪ್ರಾಮುಖ್ಯತೆಯನ್ನು ಶ್ರೀ ವಿ ಎಸ್ ಭಟ್ಟಾಚಾರ್ಯರು ವಿವರಿಸಿದರು

## ಫೆಬ್ರವರಿ ೩, 1992

ಪ್ರಖ್ಯಾತ **ವೇದಾಂತಿ ಮುನಿ** ಶ್ರೀ ಶಿವಬಾಲಯೋಗಿ ಮಹಾರಾಜರು ವೇದಶಾಸ್ತ್ರಗಳ **ಸದ**ಸ್ಸನ್ನು ಆಯೋಜಿಸುವುದರ ಮೂಲಕ ವಿಶ್ವ**ಶಾಂತಿ,** ಹಾಗೂ ವಿಶ್ವಸೌಹಾರ್ದವನ್ನು ಸಾಧಿಸುವ **ಗುರಿ** ಹೊಂದಲಾಗಿದೆಯೆಂದು ಉದ್ಘಾಟಿಸಿದರು



ತಾಯಹಾಲಿನಂತಹ ವೇದಗಳು ಹಸುವಿನ ಹಾಲಿನಂತಹ ಶಾಸ್ತ್ರಗಳು ಘನೀಕರಿಸಿದ ಹಾಲಿನಂತಹ ಇತಿಹಾಸ ಪುರಾಣಗಳನ್ನು ಬಿಟ್ಟು ಆಧುನಿಕ ಸಮಾಜವು ಕಲುಷಿತವಾದ ನೀರನ್ನು ಬಯಸುತ್ತಿದೆ ಎಂದು ವಿಷಾದವಟ್ಟರು ವೇದಗಳ ಅಧ್ಯಯನದಿಂದ ಮಾನವೀಯತೆಯ ಉದ್ಧಾರವಾಗಿ ವಿಶ್ವಶಾಂತಿ ನೆಲೆಗೊಳ್ಳುವುದೆಂದರು ಪರೋಪಕಾರಾರ್ಥವಾಗಿಯೇ ಈ ಶರೀರವಿದೆ ಎನ್ನುವ ಪ್ರಾಚೀನೋಕ್ತಿಯನ್ನು ಅವರು ಸಭೆಗೆ ನೆನಪಿಸಿದರು **ಈ ತತ್ವ ಆಚರಣೆಯಲ್ಲಿ ಬಂದಾಗ ಮಾತ್ರವೇ ಸಮಾಜ** ವಿಕಾಸ ಹಾಗೂ ವ್ಯಕ್ತಿ ವಿಕಸನ ಸಾಧ್ಯವೆಂದೂ ಇಲ್ಲದಿದ್ದಲ್ಲಿ ಎಲ್ಲವೂ ನಾಶವಾಗುವುದೆಂದೂ ತಿಳಿಹೇಳಿದರು



ಕೇಂದ್ರ ವಿತ್ತ ಶಾಖೆಯ ಉಪ ಮಂತ್ರಿ ಶ್ರೀ ರಾಮೇಶ್ವರ ಠಾಕೂರರು ಒಂದು ವೇದ ವಿಶ್ವ ವಿದ್ಯಾಲಯ ಸ್ಥಾಪನೆಯ ಅಗತ್ಯವನ್ನು ಕುರಿತು ಮಾತನಾಡುತ್ತ, **ಶಿಕ್ಷಣ ಸಂಸ್ಥೆಗಳು ಇದಕ್ಕೆ ಅಗತ್ಯವಾದ ಮೂಲ ಪರಿಕರಗಳನ್ನು ಒದಗಿಸ ಬಲ್ಲ**ವೆಂದು ಸಲಹೆನೀಡಿದರು **ಇಂತ** ವಿಶ್ವವಿದ್ಯಾಲಯದಿಂದ ವೇದಗಳನ್ನು ಇತರ ವಿಜ್ಞಾನಗಳೊಂದಿಗೆ ಬೆಸೆಯುವ ಮೇಲ್ಮಟ್ಟದ ಸಂಶೋಧನೆಗಳು ಸಾಧ್ಯವೆಂದು ತಿಳಿಸಿದರು

ಕೇಂದ್ರ ಸುದ್ದಿ ಶಾಖೆಯ ಉಪಮಂತ್ರಿ ಶ್ರೀಮತಿ ಗಿರಿಜಾವ್ಯಾಸ್ ಅವರು ಮಾತನಾಡುತ್ತ ವೇದಗಳ ಮೂಲ ಗುರಿ ವಿಶ್ವ ಸಮಾನತೆಯೆಂದೂ ಜೊತೆಗೆ ಅವು ಅರ್ಥಕಾಮಗಳಿಗೂ ಒತ್ತು ನೀಡಿದವು ಎಂದೂ ಇವೆರಡೂ ಧರ್ಮದ ಆಧಾರದಲ್ಲೇ ನಡೆಯಬೇಕು ಎಂದು ವಿಧಿಸಿದವು ಎಂದರು ಇದನ್ನು ತಿಳಿದಲ್ಲಿ ಮಾತ್ರವೇ ಇಂದು ಜಗತ್ತು ಎದುರಿಸುತ್ತಿರುವ ಸಂದಿಗ್ಧ ಪರಿಸ್ಥಿತಿಯಿಂದ ಹೊರಬರಲು ಸಾಧ್ಯ ಎಂದರು ಹಾಗಾಗಿ ಶೀಘ್ರದಲ್ಲಿಯೇ ವೇದಗಳ ಬಗ್ಗೆ ಅಂತರರಾಷ್ಟ್ರೀಯ ಸಮ್ಮೇಳನವನ್ನೂ ಏರ್ಪಡಿಸುವಂತಾಗಲಿ ಎಂದರು

ಯಜ್ಞ ಯಾಗಾದಿಗಳ ಪರಂಪರೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು, ಶ್ರೌತ ಸೂತ್ರಗಳ ವಿಸ್ತೃತ ಅಧ್ಯಯನದ ಅಗತ್ಯವಿದೆಯೆಂದು ಪ್ರಾಚಾರ್ಯ ಡಾ|| ಎಂ ಡಿ ಬಾಲಸುಬ್ರಹ್ಮಣ್ಯಂ ಅವರು ನುಡಿದರು ಕಾಲದಿಂದ ಕಾಲಕ್ಕೆ ನಡೆಸುವ ಹಲವು ಯಜ್ಞಗಳ ವಿವರವಾದ ಮಹತ್ವವನ್ನು ತಿಳಿಸಿದರು ಆಧ್ಯಾತ್ಮಿಕ ಭೌತಿಕ ಸುಖಶಾಂತಿಗಳಿಗೆ ನಿತ್ಯವಿಧಿಗಳನ್ನು ಕ್ರಮತಪ್ಪದೆ ಪಾಲಿಸಬೇಕು ಎಂದು ಕರೆನೀಡಿದರು

ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಡಾ|| ಆರ್ ಸಿ ದ್ವಿವೇದಿಯವರು ಆಧುನಿಕ ಸಮಾಜದಲ್ಲಿ ಮರೆತು ಹೋಗಲಾಗಿರುವ ನಿತ್ಯವಿಧಿಗಳ ಮಹತ್ವದ ಪ್ರಯೋಜನಗಳನ್ನು ವಿವರಿಸಿದರು ವಿವಿಧ ಕಾಲಗಳಲ್ಲಿ ಆಚರಿಸುವ ಯಜ್ಞಗಳ ಪ್ರಾಧಾನ್ಯವನ್ನೂ ವಿವರಿಸಿದರು

ಕೇಂದ್ರ ಸಾಹಿತ್ಯ ಅಕಾಡಮಿಯ ಕಾರ್ಯದರ್ಶಿ ಡಾ|| ಇಂದ್ರನಾಥ ಚೌದರಿಯವರು ಭಾರತೀಯ ಸಂಸ್ಕೃತಿಯ ಹಿರಿಮೆಯನ್ನು ಕುರಿತು ಮಾತನಾಡಿದರು ಯಾವುದೇ ವೈದಿಕ ವಿಧಿಯನ್ನೂ ಪ್ರತ್ಯೇಕವಾಗಿ ತೆಗೆದುಕೊಂಡು ಚಿಂತಿಸದೆ ಅವನ್ನು ವೇದಗಳ, ಶಾಸ್ತ್ರಗಳ ಹಿನ್ನೆಲೆಯಲ್ಲಿ ತೆಗೆದುಕೊಂಡೇ ವಿವರಿಸಬೇಕು ಎಂದರು ಭಾರತೀಯಪರಂಪರೆ ನಿಂತನೀರಲ್ಲವೆಂದೂ ನಿರಂತರ ಹರಿಯುವ ಜೀವನದಿಯೆಂದೂ ಅವರು ಹೇಳುತ್ತ ವಿವಿಧ ಪುಷ್ಪಗಳಿಂದ ಮಧು ಸಂಗ್ರಹಿಸಿದಂತೆಯೇ ವೇದಗಳ ವೈವಿಧ್ಯಮಯ ಮುಖಗಳಿಂದ ಜ್ಞಾನ ಸಂಗ್ರಹಿಸಬೇಕೆಂದರು

ಡಾ|| ಎ ಎಸ್ ರಾಮನಾಥನ್ ಅವರು ಮಾತನಾಡುತ್ತ ಆಕಾಶದ ಬಗ್ಗೆ ವೇದಗಳಲ್ಲಿ ವ್ಯಾಪಕವಾದ ವಿಷಯ ಸಂಗ್ರಹವಾಗಿದೆಯೆಂದು ತಿಳಿಸುತ್ತ ಶ್ರೌತಸೂತ್ರದ ವಿಧಿಗಳೆಲ್ಲ ವಾತಾವರಣ ಸಮತೋಲನವನ್ನು ಕಾಪಾಡಿಕೊಳ್ಳಲು ಉದ್ದೇಶಿತವಾದವು ಎಂದರು

ಶ್ರೀ ಎಂ ಶ್ರೀರಂಗಾಚಾರ್ಯರು ಶಾಸ್ತ್ರಗಳಲ್ಲಿ ಹೇಳಿದ ಸಂಸ್ಕಾರಗಳನ್ನು ಅನುಸರಿಸಬೇಕಾದ ಅಗತ್ಯವನ್ನು ವಿವರಿಸಿದರು

ಇಷ್ಟು ದೊಡ್ಡ ಪ್ರಮಾಣದಲ್ಲಿ ವೇದಶಾಸ್ತ್ರ ಸಮ್ಮೇಳನವನ್ನು ಸಂಯೋಜನೆಗೊಳಿಸಿದ ತಿ ತಿ ದೇವಸ್ಥಾನಗಳನ್ನು ಶ್ಲಾಘಿಸಿದ ಪ್ರಾಚಾರ್ಯಧಾಮಾನಂದ ಮುಖರ್ಜಿಯವರು ವಿಶ್ವಶಾಂತಿಗಾಗಿ ವೇದಗಳ ಆಳವಾದ ಅಧ್ಯಯನ ಅಗತ್ಯವೆಂದರು

ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದರಿಗೆ ಪ್ರಖ್ಯಾತ ವಿದ್ವಾಂಸ ಶ್ರೀ ಮಧುಸೂಧನ ಓಝು ಅವರು ಬರೆದ ಪುಸ್ತಕಗಳನ್ನು ಅವರ ಪೌತ್ರ ಶ್ರೀ ಪ್ರದ್ಯುಮ್ನ ಓಝು ಅವರು ಕಾಣಿಕೆಯಾಗಿ ನೀಡಿದರು

ತಿ ತಿ ದೇವಸ್ಥಾನಗಳ ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾದ ಶ್ರೀ ಟಿ ಸುಬ್ಬರಾಮಿರೆಡ್ಡಿ ಅವರು ಸಭೆಯನ್ನು ಸ್ವಾಗತಿಸಿ ಇಂತಹ ಸಮ್ಮೇಳನಗಳನ್ನು ದೇಶದ ಇತರೆಡೆಗಳಲ್ಲೂ ಏರ್ಪಾಡು ಮಾಡಲಾಗುವುದೆಂದರು

## ಸಂಜೆಯ ಹೊತ್ತಿನ ಸಾಂಸ್ಕೃತಿಕ ಕಾರ್ಯಕ್ರಮಗಳು

ಸಮ್ಮೇಳನದ ದಿನಗಳಲ್ಲಿ ದಿನವೂ ಸಂಜೆ 7 ಗಂಟೆಯಿಂದ ಸಂಗೀತ ನಾಟಕ ಹರಿಕಥೆ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿ ಸಮ್ಮೇಳನದ ಪ್ರತಿನಿಧಿಗಳನ್ನೂ ಸಭಿಕರನ್ನೂ ಸಂಸ್ಕೃತದತ್ತಲೂ ಸಂಸ್ಕೃತಿಯತ್ತಲೂ ಆಕರ್ಷಿಸುವಲ್ಲಿ ಯಶಸ್ವಿಯಾದವು

ಮೊದಲನೆಯದಿನ ಖ್ಯಾತ ಸಂಗೀತ ವಿದುಷಿ ಶ್ರೀಮತಿ ಎಂ ಎಸ್ ಸುಬ್ಬುಲಕ್ಷ್ಮಿಯವರು ತಮ್ಮ ದಿವ್ಯಗಾಯನದಿಂದ ಸಭಿಕರನ್ನು ರಸ ಪ್ರವಾಹದಲ್ಲಿ ಸೆಳೆದೊಯ್ದರು

ಶ್ರೀಮತಿ ಪಿ ಸುಶೀಲ ಹಾಗೂ ಶ್ರೀ ರಾಮಕೃಷ್ಣ ಅವರ ಗಾಯನ ಸಭೆ ನಡೆದಂದು ಹೆಚ್ಚು ಮಂದಿ ಆಕರ್ಷಿತರಾದರು

ತಿರುಪತಿಯ ನಟರತ್ನ ನಿರ್ದೇಶಕ ಶ್ರೀ ಎನ್ ವಿ ರಂಗಭಟ್ಟರ್ ಅವರ ನಿರ್ದೇಶನದಲ್ಲಿ ಶ್ರೀ ವೆಂಕಟೇಶ್ವರ ಆವಿರ್ಭಾವ ಸಂಸ್ಕೃತನಾಟಕ ಕಳೆಕಟ್ಟಿತು

ಶ್ರೀ ಮಂಗಳಂಪಲ್ಲಿ ಬಾಲಮುರಳೀ ಕೃಷ್ಣರು ತಮ್ಮ ವಿಶಿಷ್ಟ ಸಂಶೋಧನೆಯ ಸಂಗೀತದಿಂದ ರಸಿಕರನ್ನು ಸಧ್ಯವರ ನಿವೃತ್ತರಾಗುವಂತೆ ಮಾಡಿದರು

## ಸಮಾರೋಪ

ಮೂರನೇ ಫೆಬ್ರವರಿಯಂದು ವೇದ ಶಾಸ್ತ್ರ ಸಮ್ಮೇಳನದ ಸಮಾರೋಪ ಸಮಾರಂಭ ಕಂಚಿ ಪೀಠಾಧಿಪತಿಗಳ ಅಧ್ಯಕ್ಷತೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ನೆ ದುರುಮಲ್ಲಿ ಜನಾರ್ದನ ರೆಡ್ಡಿ ಅವರು ಕುಟುಂಬ ಸಹಿತರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿ ಸಂದರ್ಶನವನ್ನು ಪಡೆದು ದೇವಾಲಯದಿಂದ ಐದು ಕಿ ಮೀ ದೂರದ ಬ್ರಹ್ಮಗಿರಿಯಲ್ಲಿನ ತಿ ತಿ ದೇ ವೇದಪಾಠಶಾಲಾ ಸಮುದಾಯವನ್ನು ನೋಡಿಕೊಂಡು ಬಂದು ತಿ ತಿ ದೇಗಳ ವತಿಯಿಂದ ತಿರುಮಲೆಯ ಕೂರಾಪುರಂ ತೋಟದಲ್ಲಿ 18 ಕೋಟಿ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಯೋಚಿಸಿರುವ ಅತಿಥಿಗೃಹ ಸಮುದಾಯಕ್ಕೆ ಶಂಕುಸ್ಥಾಪನೆ ಮಾಡಿ ನಾಲ್ಕು ಗಂಟೆಗೆ ಸಮ್ಮೇಳನದ ಸಮಾರೋಪದಲ್ಲಿ ಭಾಗವಹಿಸಿದರು ಕೇಂದ್ರ ಆರ್ಥಿಕಶಾಖೆಯ ಮಂತ್ರಿ ಶ್ರೀ ರಾಮೇಶ್ವರ ರಾಕೂರರೂ ಪ್ರಧಾನ ಅತಿಥಿಗಳಾಗಿ ಭಾಗವಹಿಸಿದ್ದ ಸಭೆಯನ್ನು ತಿ ತಿ ದೇ ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಟಿ ಸುಬ್ಬರಾಮಿರೆಡ್ಡಿ ಅವರು ಸ್ವಾಗತಿಸಿದರು

ಮುಖ್ಯಮಂತ್ರಿಯವರು ಮಾತನಾಡುತ್ತ ಸಮ್ಮೇಳನದಲ್ಲಿ ಭಾಗವಹಿಸಿದ ವಿದ್ವಾಂಸರ ಪರಸ್ಪರ ವಿಚಾರವಿನಿಮಯದಿಂದ ಹೊರಬಂದ ಫಲಿತವನೀತದ ಬಗ್ಗೆ ವಿಶ್ಲೇಷಿಸುತ್ತ ಯಾವುದೇ ಕಾರ್ಯಯೋಜನೆಗೂ ತಮ್ಮ ಬೆಂಬಲವಿದೆಯೆಂದು ತಿಳಿಸುತ್ತ ತಿರುಮಲೆಯಲ್ಲಿ ವೇದ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಬಗ್ಗೆ ತಾವು ಪ್ರಧಾನಮಂತ್ರಿಗಳೂ ದೇಶದ ಮತ್ತೊಬ್ಬ ಮಹಾವಿದ್ವಾಂಸರೂ ಆದ ಶ್ರೀ ಪಿ ವಿ ನರಸಿಂಹರಾವ್ ಅವರೊಡನೆ ಚರ್ಚಿಸಿ ಸೂಕ್ತ ಕ್ರಮವನ್ನು ಕೈಗೊಳ್ಳುವುದಾಗಿಯೂ ತಿಳಿಸಿದರು

ಕೇಂದ್ರ ಆರ್ಥಿಕ ಶಾಖಾಮಂತ್ರಿ ಶ್ರೀ ರಾಮೇಶ್ವರ ರಾಕೂರರು ಮಾತನಾಡುತ್ತ ತಿರುಮಲೆಯಲ್ಲಿ ವೇದ ವಿಶ್ವವಿದ್ಯಾಲಯದ ಸ್ಥಾಪನೆಗೆ ಅಗತ್ಯ ನೆರವನ್ನು ಕೇಂದ್ರ ಸರ್ಕಾರದ ವತಿಯಿಂದ ದೊರಕಿಸಿಕೊಳ್ಳಲು ತಮ್ಮ ಕೈಲಾದಂತೆ ಸಹಾಯ ಮಾಡುವುದಾಗಿ ಭರವಸೆ ನೀಡಿದರು

ತಿ ತಿ ದೇ ಅಧ್ಯಕ್ಷರು ಶ್ರೀ ಟಿ ಸುಬ್ಬರಾಮಿರೆಡ್ಡಿಯವರು ಮಾತನಾಡುತ್ತ ಇಡೀ ಮಾನವಜನಾಂಗಕ್ಕೆ ಶ್ರೇಯಸ್ಕರವಾದ ವೇದಗಳನ್ನು ದೇಶಭಾಷೆಗಳಲ್ಲೆಲ್ಲ ಸರಳಾನುವಾದಗೊಳಿಸಿ ಪ್ರಕಟಿಸುವುದಾಗಿಯೂ ದೇವಾಲಯ ಆರಾಧನಾ ಪದ್ಧತಿಯನ್ನು ಹೆಚ್ಚು ವ್ಯವಸ್ಥಿತಗೊಳಿಸಲು ಪೂಜಾ ಪದ್ಧತಿ ಪರಂಪರೆಯ ಶಿಕ್ಷಣ ಶಾಲೆಯನ್ನು ಏರ್ಪಡಿಸುವುದಾಗಿಯೂ ನುಡಿದರು

ಮುಖ್ಯ ಅತಿಥಿಗಳನ್ನು ಕಂಚಿ ಸ್ವಾಮಿಗಳ ಮೂಲಕ ಸನ್ಮಾನಿಸಲಾಯಿತು

ಕಾರ್ಯಕ್ರಮ ಸಂಯೋಜಕರು ಡಾ|| ಎಸ್ ಬಿ ರಘುನಾಥಾಚಾರ್ಯ ಹಾಗೂ ಪೌರಸಂಬಂಧಾಧಿಕಾರಿ ಡಾ|| ಆರ್ ಸೂರ್ಯನಾರಾಯಣ ಮೂರ್ತಿ ಅವರುಗಳನ್ನೂ ಸಮ್ಮೇಳನ ನಿರ್ವಾಹಕ ನಿರ್ದೇಶಕ ಶ್ರೀ ಎಂ ವಿ ಎಸ್ ಪ್ರಸಾದ್ ಅವರನ್ನೂ ತಿ ತಿ ದೇ ಅಧ್ಯಕ್ಷ ಶ್ರೀ ಟಿ ಸುಬ್ಬರಾಮಿರೆಡ್ಡಿಯವರನ್ನೂ ಸ್ವಾಮಿಗಳು ಸನ್ಮಾನಿಸಿದರು

ಅಂದು ಸಂಜೆ ಮಂಗಳಂಪಲ್ಲಿ ಬಾಲಮುರಳೀ ಕೃಷ್ಣ ಅವರು ತಮ್ಮ ಮಧುರಗಾಯನದಿಂದ ಸಮ್ಮೇಳನದ ಪ್ರತಿನಿಧಿಗಳನ್ನೂ ವೇದಾಭಿಮಾನಿಗಳನ್ನು ಆನಂದಗೊಳಿಸಿದರು ✳

# ಸಮಾವೇಶದ ತೀರ್ಮಾನಗಳು

ಸಮ್ಮೇಳನದ ಪ್ರತಿನಿಧಿ ಸಭೆ ವೇದಸಮ್ಮೇಳನದ ಏರ್ಪಾಡಿಗಾಗಿ ತಿ ತಿ ದೇವಸ್ಥಾನಗಳನ್ನು ಅಭಿನಂದಿಸುವುದರೊಡನೆ ಹಲವಾರು ಪ್ರಮುಖ ನಿರ್ಣಯಗಳನ್ನೂ ಕೈಗೊಂಡಿತು ಅವುಗಳಲ್ಲಿ ಹಲವೆಂದರೆ–

* ಜ್ಞಾನ ಭಂಡಾರವಾಗಿರುವ ವೇದಗಳ ಶಾಸ್ತ್ರಗಳ ಅಧ್ಯಯನಕ್ಕೆ ಸಾಕಷ್ಟು ಪ್ರಾಧಾನ್ಯ ಸಮಕಾಲೀನ ಸಮಾಜದಲ್ಲಿ ದೊರೆಯದಿರುವುದು ನಿಚ್ಚಳವಾಗಿರುವುದು ವೇದಗಳಲ್ಲಿರುವ ವಿಶ್ವಮಾನವ ಭ್ರಾತೃತ್ವ ಸೌಹಾರ್ದ ಸಹಿಷ್ಣುತೆ ಸಮತೆಯೊಂದಿಗಿನ ಅಭಿವೃದ್ಧಿ ಭಾವಗಳನ್ನು ಹರಡಬೇಕಾದ್ದು ಮಾನವೀಯತೆಯ ಉಳಿವಿನ ದೃಷ್ಟಿಯಿಂದ ಇಂದು ತುರ್ತಾಗಿ ಆಗಬೇಕಾದ ಕೆಲಸವಾಗಿದೆಯಾದ್ದರಿಂದ ಇವೆರಡೂ ಉದ್ದೇಶಗಳ ಸಾಧನೆಗಾಗಿ ವಿವಿಧ ಪೀಠಾಧಿಪತಿಗಳ ವಿದ್ವಾಂಸರ, ಕೇಂದ್ರ ರಾಜ್ಯಸರ್ಕಾರಗಳ ಧರ್ಮ ಸಂಸ್ಥೆಗಳ ಪ್ರತಿನಿಧಿಗಳ ಒಂದು ಉನ್ನತ ಸ್ಥಾಯಿಯ ಸಂಚಾಲಕ ಸಮಿತಿಯನ್ನು ರಚಿಸಿ, ಈ ಉನ್ನತ ಮಟ್ಟದ ಸಮಿತಿಯು ಎಲ್ಲ ರೀತಿಯ ವೇದ ಹಾಗೂ ಶಾಸ್ತ್ರಾಧ್ಯಯನಗಳ ಯೋಜನೆಗಳನ್ನು ಅಂಗೀಕರಿಸುವ ಪ್ರಾಧಿಕಾರವಾಗಿಯೂ ಇಡೀ ದೇಶದ ವಿವಿಧ ವೇದ ಪಾಠಶಾಲೆಗಳ ಪ್ರಣಾಳಿಕೆಗಳಿಗೆ ಬೇಕಾದ ವಿಷಯ ಸಂಗ್ರಹಣ ವಿತರಣಾ ಕೇಂದ್ರದಂತೆಯೂ ಕೆಲಸ ಮಾಡಬೇಕು ವಿವಿಧ ಶಾಲಾ ಕಾಲೇಜುಗಳ ವರ್ಗ ವಿಷಯದಲ್ಲಿನ ಸಂಸ್ಕೃತ ವೇದ ಶಾಸ್ತ್ರಗಳ ಸೇರ್ಪಡೆಯ ಬಗ್ಗೆ ಈ ಸಮಿತಿಯ ಒಂದು ಉಪಸಮಿತಿ ಕೆಲಸ ಮಾಡಬೇಕು ಇಡೀ ದೇಶದಲ್ಲಿರುವ ವೇದ ಪಾಠಶಾಲೆಗಳ ಗಣತಿ ನಡೆಸಿ ಅಲ್ಲಿನ ಅನುಕೂಲಗಳು ಅಗತ್ಯಗಳು, ಅವಕಾಶಗಳನ್ನು, ತಿಳಿದು ನೆರವು ನೀಡುವ ಸಂಸ್ಥೆಗಳಿಗೆ ಆಯಾ ವಿದ್ಯಾಲಯಗಳ ಅಗತ್ಯವನ್ನು ತಿಳಿಸುವಂತೆ ಆಗಬೇಕು

ಒಂದು ವೇದ ವಿಶ್ವವಿದ್ಯಾಲಯವನ್ನುಂಟುಮಾಡಲು ಕೇಂದ್ರ ಸರ್ಕಾರವನ್ನು ಪ್ರತಿನಿಧಿ ಸಭೆ ಒತ್ತಾಯಿಸುತ್ತದೆ ಈ ವೇದ ವಿಶ್ವವಿದ್ಯಾಲಯ ವಿಶೇಷವಾಗಿ ಕೆಳಕಂಡ ಅಂಶಗಳನ್ನು ಕೈಗೆತ್ತಿಕೊಳ್ಳಬೇಕು

1 ವೇದ ಹಾಗೂ ಶಾಸ್ತ್ರಗಳ ಪಠ್ಯಗಳ ಕಂಪ್ಯೂಟರೀಕೃತ ಭಂಡಾರ ನಿರ್ಮಾಣ

2 ಸಂಸ್ಕೃತ ಹಸ್ತಪ್ರತಿಗಳನ್ನೂ ಅವರೂವರ ಕೃತಿಗಳನ್ನೂ ಕಂಪ್ಯೂಟರೀಕೃತಗೊಳಿಸಿ ಆ ಮೂಲಕ ವಿಮರ್ಶಾತ್ಮಕ ಸಂಪಾದನೆಗೆ ಅನುವು ಮಾಡಿಕೊಡುವ ಒಂದು ಕಂಪ್ಯೂಟರ್ ಕೇಂದ್ರ

3 ಆಚಾರ ಸಂಸ್ಕಾರ ವಿಧಿಗಳ ಧ್ವನಿಸುರುಳಿ ಹಾಗೂ ಚಿತ್ರೀಕರಣ



4 ಸೂಕ್ಷ್ಮ ಚಿತ್ರಗಳ ತಯಾರಿಕೆ ಹಾಗೂ ಸಂರಕ್ಷಣೆ

5 ಉನ್ನತ ಮಟ್ಟದ ಪರಿಶೋಧನಾ ವೃತ್ತ ಪತ್ರಿಕೆಯ ಪ್ರಕಟನೆ

6 ವೇದ ಪುರಾಣ ಆಗಮ ಶಾಸ್ತ್ರಗಳ ಪಠ್ಯಗ್ರಂಥಗಳ ಪ್ರಕಟನೆ

* ಪಶ್ಚಿಮ ಬಂಗಾಳ ಅಸ್ಸಾಂ ರಾಜಾಸ್ಥಾನ ಪಂಜಾಬ್ ಹರ್ಯಾನ ಮಧ್ಯಪ್ರದೇಶ, ಹಿಮಾಚಲ ಪ್ರದೇಶಗಳಂತಹ ಗಡಿ ಪ್ರಾಂತಗಳಲ್ಲಿ ಖಿಲವಾಗುತ್ತಿರುವ ವೇದಾಧ್ಯಯನದ ಆಸಕ್ತಿಯನ್ನು ಪುನರುತ್ಥಾನಗೊಳಿಸಲು ಅಲ್ಲಲ್ಲಿ ವೇದಪಾಠಶಾಲೆಗಳನ್ನು ಸ್ಥಾಪಿಸಲು ಯತ್ನಗಳು ನಡೆಯಬೇಕು

* ವೇದ ಶಾಸ್ತ್ರಗಳ ಅಧ್ಯಯನದಲ್ಲಿ, ಪ್ರಚಾರದಲ್ಲಿ, ಅಭ್ಯಾಸದಲ್ಲಿ ತೊಡಗಿರುವ ವಿದ್ಯಾರ್ಥಿ ವಿದ್ವಾಂಸ, ಪರಿಶೋಧಕರಿಗೆ ಸಾಕಷ್ಟು ಪ್ರೋತ್ಸಾಹ – ಧನರೂಪದಲ್ಲಿ, ಉದ್ಯೋಗರೀತ್ಯ – ದೊರೆಯುವಂತೆ ಆಗಬೇಕು

* ವೇದ ಶಾಸ್ತ್ರಗಳ ಸಮ್ಮೇಳನವನ್ನು ಏರ್ಪಾಡು ಮಾಡಿ ಯಶಸ್ವಿಗೊಳಿಸಿದುದಕ್ಕಾಗಿ ತಿ ತಿ ದೇ ಗಳಿಗೆ ಆಭಾರ ಕೃತಜ್ಞತೆಯನ್ನು ಸೂಚಿಸುತ್ತ ದೇಶದ ವಿವಿಧ ಸ್ಥಳಗಳಲ್ಲಿ ವರ್ಷಕ್ಕೊಮ್ಮೆಯಾದರೂ ಇಂತಹದೇ ಸಮ್ಮೇಳನವು ನಡೆಯುವಂತಾಗಿ ಪರಸ್ಪರ ವಿಚಾರವಿನಿಮಯ ಕಾರ್ಯತಂತ್ರಯೋಜನೆ ಹಿಂದಿನ ವರ್ಷದ ಕಾರ್ಯಗಳ ಸಮೀಕ್ಷೆಗಳನ್ನು ನಡೆಸಿ ಯಶಸ್ವಿಯಾಗಿ ಮುಂದುವರೆಯಲು ಅಗತ್ಯವಾದ ನಿರಂತರತೆಯನ್ನುಂಟು ಮಾಡಲು ಅವಕಾಶ ಮಾಡಿಕೊಡಬೇಕೆಂದು ಕೇಂದ್ರ ಸರ್ಕಾರ ರಾಜ್ಯಸರ್ಕಾರ ತಿ ತಿ ದೇ ವೇದವಿದ್ಯಾ ಪ್ರತಿಷ್ಠಾನಗಳನ್ನು ಸಮ್ಮೇಳನವು ಬೇಡುತ್ತದೆ

***

# ವೇದ ವಿಜ್ಞಾನ ಸಂರಕ್ಷಣೆ

—ಪ್ರೊ|| ಬಿ ಬಿ ಚೌಬೆ

ವೇದಗಳನ್ನು ಭಾರತೀಯ ಪರಂಪರೆ ಸರ್ವ ಜ್ಞಾನದ ಸರ್ವಧರ್ಮದ ಸರ್ವ ವಿಜ್ಞಾನಗಳ ಆಧಾರವೆಂದು ಪರಿಭಾವಿಸುತ್ತದೆ ಮನು ಅವಧಾರಣ ಪೂರ್ವಕವಾಗಿ ಹೇಳುತಾನೆ —

ಚಾತುರ್ವರ್ಣ್ಯಂ ತ್ರಯೋ ಲೋಕಾ
ಚತ್ವಾರಶ್ಚಾಶ್ರಮಾ ಪೃಥಕ್
ಭೂತಂ ಭವ್ಯಂ ಭವಿಷ್ಯಂ ಚ
ಸರ್ವಂ ವೇದಾತ್ಪ್ರಸಿದ್ಧ್ಯತಿ
ಶಬ್ದ ಸ್ಪರ್ಶಶ್ಚ ರೂಪಂ ಚ
ರಸೋ ಗಂಧಶ್ಚ ಪಂಚಮ
ವೇದಾದೇವ ಪ್ರಸೂಯಂತೇ
ಪ್ರಸೂತಿ ಗುಣ ಕರ್ಮತ
ಬಿಭರ್ತಿ ಸರ್ವ ಭೂತಾನಿ
ವೇದಶಾಸ್ತ್ರಂ ಸನಾತನಮ್
ತಸ್ಮಾದೇತತ್ಪರಂ ಮನ್ಯೇ
ಯಜ್ಜಂತೋರಸ್ಯ ಸಾಧನಮ್
-ಮನು - 12-97-99

ಜೊತೆಗೆ ಪಿತೃ, ದೇವತೆ ಮನುಷ್ಯರ ನಿತ್ಯ ನಯನಗಳಾಗಿವೆ ವೇದಗಳು ಎಂದು ಸ್ಥಾಪಿಸುತ್ತಾನೆ

ಪಿತೃದೇವ ಮನುಷ್ಯಾಣಾಂ
ವೇದಶ್ಚಕ್ಷು ಸನಾತನಮ್
ಅಶಕ್ಯಂ ಚಾ ಪ್ರಮೇಯಂ ಚ
ವೇದಶಾಸ್ತ್ರಮಿತಿ ಸ್ಥಿತಿ
-ಮನು - 12-94

ವೇದಗಳ ಒಳ ತಿರುಳು ಅಲ್ಲಿ ವಿವರಿಸಿರುವ ಯಾವುದೂ ಜಗತ್ತಿನಾದ್ಯಂತ ಮನುಷ್ಯರು ಅನುಸರಿಸುತ್ತಿರುವ ಯಾವುದೇ ಧರ್ಮದ ವಿರುದ್ಧವಲ್ಲವೆಂಬುದನ್ನು ಸ್ಪಷ್ಟ ಪಡಿಸುತ್ತದೆ ಅದು ಇಡೀ ಮಾನವ ಕುಲಕ್ಕೆ ಎಲ್ಲ ಕಾಲಕ್ಕೂ ಸಮಾನವಾದ ಒಳಿತನ್ನೇ ಬಯಸುತ್ತದೆ ಹಾಗಾಗಿ ವೇದಗಳು, ಪ್ರಕೃತಿ ನಿಯಮಗಳು ಹಾಗೂ ಮನುಷ್ಯನ ಕರ್ತವ್ಯಗಳ ನಡವೆ ಸಂಯೋಗವನ್ನು ಕಾಣಬಲ್ಲ ದೈವಿಕ ದೃಷ್ಟಿ ಹೊಂದಿದ ಋಷಿ ಮುನಿಗಳು ವಿಶಿಷ್ಟ ಆದರ್ಶ ಜೀವನಕ್ಕೆಂದು ನಿರೂಪಿಸಿದ ವಿಶ್ವಮಾನವ ಸಂವಿಧಾನವಾಗಿದೆ ಪ್ರಕೃತಿಯ ಗೂಢತೆಯನ್ನು ಬೆಳಕಿಗೊಡ್ಡುವುದು ವಿಜ್ಞಾನವಾದರೆ ಅದರೊಂದಿಗೆ ತೀವ್ರ ಸಂಬಂಧವನ್ನು ಸ್ಥಾಪಿಸಿ ಬೆಳೆಯುವಿಕೆಯನ್ನು ಧರ್ಮವೆನ್ನಬಹುದು ವಿಶ್ವದ ಪ್ರತಿ ಕಣವೂ ತನ್ನ ಇರುವಿಕೆಯನ್ನು ಸಮರ್ಥಿಸಲು ತನ್ನ ಕೈಲಾದ ಪಂತಿಗೆಯನ್ನು ಸಲ್ಲಿಸಬೇಕು ಮೇಲಕ್ಕೆ ಪರಸ್ಪರ ವಿರುದ್ಧವಾಗಿ ಕಂಡುಬಂದರೂ ಅವೆಲ್ಲ ಒಂದು ಸಮಗ್ರದ ಭಾಗಗಳಾಗಿ ಯಾವುದೂ ಅಮುಖ್ಯವಾಗುವುದಿಲ್ಲ ಇಡೀ ವಿಶ್ವತತ್ವದ ಪ್ರತಿಯೊಂದು ಕ್ರಿಯೆಯನ್ನೂ ಒಟ್ಟುಗೂಡಿಸಿ ಯಜ್ಞವೆನ್ನಲಾಗುತ್ತದೆ ಈ ವಿಶ್ವಯಜ್ಞ ಪ್ರಪಂಚದಲ್ಲಿನ ಕೆಲಸಗಳನ್ನೂ ಒಳಗೊಂಡು ಧರ್ಮವಾಗುತ್ತದೆ ಇದನ್ನು ವೇದದಲ್ಲೇ ಸ್ಪಷ್ಟವಾಗಿ ಹೇಳಲಾಗಿದೆ

ಯಜ್ಞೇನ ಯಜ್ಞಮಯಜಂತ
ದೇವಾಸ್ತಾನಿ ಧರ್ಮಾಣಿ ಪ್ರಥಮಾ ನ್ಯಾಸನ್
ತೇ ಹ ನಾಕಂ ಮಹಿಮಾನ
.... ಯತ್ರ ಪೂರ್ವೇ ಸಾಧ್ಯಾ
ಸಂತಿ ದೇವಾ
-ಋ - 1-164-50

ಮನುಷ್ಯ ಹಂತದಲ್ಲಿ ಈ ವಿಶ್ವಯಜ್ಞವನ್ನು ಕೆಲವು ಅನುಷ್ಠಾನಗಳನ್ನು (ಪ್ರಕ್ರಿಯೆಗಳ) ಅನುಕರಿಸಿ ಆಚರಿಸಿದಾಗ ನಡೆಸಿದಾಗ ಅದನ್ನೂ ಯಜ್ಞವೆಂದೇ ಕರೆಯಲಾಗುತ್ತದೆ ಈ ಪ್ರಕ್ರಿಯೆಗಳನ್ನು ಆಕರ್ಷಕವಾಗಿ ಹೆಚ್ಚು ಫಲದಾಯಕವಾಗಿ ಮಾಡಲು ಕೆಲವು ಹೊಸ ವಿಧಿಗಳನ್ನು ಸೇರಿಸಲಾಯಿತು ಆದರೆ ಅದೇ ಹೊತ್ತಿನಲ್ಲಿ ಮನುಷ್ಯಮಟ್ಟದ ಪ್ರಕ್ರಿಯೆಗಳು ಸಂಸ್ಕಾರಗಳು ವಿಶ್ವಯಜ್ಞದ ಅನುಕರಣೆ ಎಂಬುದನ್ನು ಮರೆಯಬಾರದು ವೇದಗಳು ದೈವೀಶಕ್ತಿಗಳು ಆಚರಿಸುವ ವಿಶ್ವಯಜ್ಞ ಹಾಗೂ ಮಾನವ ಮಾತ್ರರು ಆಚರಿಸುವ ಲೌಕಿಕ ಯಜ್ಞಗಳೆರಡನ್ನೂ ಕುರಿತು ವಿವರಣೆ ಸಮರ್ಥನೆ ನೀಡುತ್ತವೆ ಮಾನವ ಹಂತದ ಯಜ್ಞದಲ್ಲಿ ದೈಹಿಕವಾದ ಅರ್ಪಣೆಯಾದರೆ ದೈವಿಕ ಹಂತದಲ್ಲಿ ಆತ್ಮವೇ ನೈವೇದ್ಯವಾಗುತ್ತದೆ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಆಚಾರದಲ್ಲಿರುವ ಯಜ್ಞಗಳು ಮಾತುಗಳಾದರೆ ದೇವಯಜ್ಞ ಅವುಗಳ ಅರ್ಥವಾಗುತ್ತದೆ ಮಾತಿಗೆ ಅರ್ಥವಿಲ್ಲದಿದ್ದಲ್ಲಿ ಮಾತು ವ್ಯರ್ಥ ಋಗ್ವೇದ ಒಂದು ಮಂತ್ರ ಇದನ್ನೇ ಪ್ರಾಯಶ ಪ್ರತಿಮಿಸುತ್ತದೆ

ಉತ್ ತ್ವ ಪಶ್ಯನ್ನ ದದರ್ಶ
ವಾಚಮುತ ತ್ವ ಶ್ರುಣ್ವಂತ ಶೃಣೋತ್ಯೇನಾಂ
ಉತೋ ತ್ವಸ್ಮೈ ತನ್ವಂ ವಿಸಸ್ರೇ
ಜಾಯೇವ ಪತ್ಯ ಉಶತೀ ಸುವಾಸಾ
-ಋ -X- 71-4

ಒಂದು ನಿವೇದನೆ ನಡೆದು ನಿವೇದಿಸುವಾತ ನೈವೇದ್ಯದ ಅರ್ಥ ತಿಳಿಯದಿದ್ದಲ್ಲಿ ಆತ ಭೌತಿಕವಾಗಿ ಅದನ್ನು ಕಾಣುತ್ತಿದ್ದರೂ ನಿಜವಾಗಿ ಕಂಡವನಲ್ಲ ಭೌತಿಕವಾಗಿ ಮಂತ್ರಗಳನ್ನು ಕೇಳಿಸಿಕೊಳ್ಳುತ್ತಿದ್ದರೂ ನಿಜದಲ್ಲಿ ಕೇಳಿದವನಲ್ಲ ಮೇಲಿನ ಮಂತ್ರದ ವಿವರಣೆ ನೀಡುತ್ತ ಯಾಸ್ಕನು ಯಜ್ಞವು ಹೂವೆಂದೂ ದೇವವಿಜ್ಞಾನವು ಫಲವೆಂದೂ ತಿಳಿಸುತ್ತಾನೆ ಇನ್ನೂ ಮೇಲ್ಮಟ್ಟದಲ್ಲಿ ದೇವವಿಜ್ಞಾನವು ಪುಷ್ಪವಾದರೆ ಆಧ್ಯಾತ್ಮ ಫಲವಾಗುವುದು

ವಾಸ್ತವವೆಂದರೆ ಮನುಷ್ಯ ಮಾಡುವ ಯಜ್ಞ - ನಿವೇದನೆಯೆಲ್ಲ - ದೇವವಿಜ್ಞಾನದ ಅರಿವನ್ನು ಪಡೆಯುವುದಕ್ಕೆಂದೇ ದೇವಜ್ಞಾನವನ್ನು ವಿವರಿಸುವ ಒಂದು ಮಾದರಿಯಷ್ಟೆ ಯಜ್ಞದ - ನಿವೇದನೆಯ ಎರಡೂ ಮುಖದ ಪರಿಚಯವನ್ನು ಬ್ರಾಹ್ಮಣಗಳ ಕರ್ತರೂ ವೇದಗಳ ಋಷಿಗಳೂ ಚೆನ್ನಾಗಿ ತಿಳಿದಿದ್ದರು ಈ ಎರಡೂ ಮುಖಗಳ ಭಾವಕೋಶಗಳು ಹೊಂದಿಕೊಂಡಿರುವ ತನಕ ವೈದಿಕ ಸಂಸ್ಕೃತಿ ಬೆಳಗಿ ವೈದಿಕ ಋಷಿಗಳು ಸ್ಥಾಪಿಸಿದ ಸಂಸ್ಕೃತಿ ಪ್ರತಿ ನಾಗರಿಕ ಜೀವಿಯೂ ಅನುಸರಿಸಬೇಕಾದ ಆದರ್ಶವಾಯಿತು

ಕಾಲಕ್ರಮದಲ್ಲಿ ವೇದಗಳ ಹಾಗೂ ಯಜ್ಞಗಳ ನಿಜವಾದ ಉದ್ದೇಶವನ್ನು ಯಜ್ಞಕರ್ತರು ನಿಧಾನವಾಗಿ ಮರೆಯತೊಡಗಿದರು ವಿಶ್ವಯಜ್ಞದೊ

ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ

## ವಾರ್ಷಿಕ ವಸಂತೋತ್ಸವ

**15-4-92 ರಿಂದ 17-4-92 ವರೆಗೆ**



| | | |
|---|---|---|
| 15-4-92 | ಬುಧವಾರ | ಶ್ರೀ ವೆಂಕಟೇಶ್ವರಸ್ವಾಮಿ ವಸಂತೋತ್ಸವ |
| 16-4-92 | ಗುರುವಾರ | ಶ್ರೀ ವೆಂಕಟೇಶ್ವರಸ್ವಾಮಿ ರಜತರಥೋತ್ಸವ (ಚೈತ್ರಪೂರ್ಣಿಮೆ) |
| 17-4-92 | ಶುಕ್ರವಾರ | ಶ್ರೀ ವೆಂಕಟೇಶ್ವರ ಸ್ವಾಮಿ, ಶ್ರೀ ಕೋದಂಡರಾಮಸ್ವಾಮಿ, ಶ್ರೀ ಕೃಷ್ಣಸ್ವಾಮಿ ಅವರುಗಳ ವಸಂತೋತ್ಸವ |

ತಾವೂ ಬನ್ನಿ ತಿ ತಿ ದೇ ನಿಮ್ಮವರನ್ನೂ ಕರೆತನ್ನಿ

ಡನೆ ಸಂಬಂಧವೆಂತಹುದೆಂದು ತಿಳಿಯದೆ ವ್ರಕ್ರಿಯೆಗಳಲ್ಲಿ ತೊಡಗುವಂತಾಯಿತು ಮುಂಡಕೋವನಿಷತ್‌ನಂತಹ ಹಲವು ಉವನಿಷತ್ತುಗಳು ವುರೋಹಿತರ ನೆರವಿನಿಂದ ಯಜಮಾನನು ನಡೆಸುವ ಆಚಾರದ ಯಜ್ಞಗಳ ವಿರುದ್ಧ ಧ್ವನಿಯೆತ್ತಿ ಇವುಗಳನ್ನು ತಳವಿಲ್ಲದ ದೋಣಿಗಳು ಎಂದು ಕರೆಯುವಷ್ಟು ದೂರ ನಡೆದವು ಜೊತೆಗೆ ವೈದಿಕ ಯಜ್ಞಗಳಲ್ಲಿ ಅರ್ಥ ತಿಳಿಯದೆ ಮಂತ್ರಗಳನ್ನು ಹೇಳುವುದಾರಂಭವಾಯಿತು ಇದರಿಂದಾಗಿ ಮಂತ್ರಗಳಿಗೆ ಯಾವುದೇ ಅರ್ಥವೂ ಇರದು ಎಂಬ ಧ್ವನಿಯೇಳತೊಡಗಿತು ಯಜ್ಞಕಾರರು ಹೇಳಿದಂತೆ ಅವುಗಳನ್ನು ವುನರುಚ್ಚರಿಸುವುದೇ ಅದರ ಉದ್ದೇಶ ಎಂದು ಕೇಳಬರತೊಡಗಿತು ಯಾಸ್ಕನು ವೇದಮಂತ್ರಗಳಿಗೆ ಅರ್ಥವಿಲ್ಲವೆನ್ನುವ ಕೌತ್ಸನಂತಹ ವಿರೋಧಿಗಳನ್ನು ಎದುರಿಸಬೇಕಾಯಿತು ಅನರ್ಥಲಾಹಿ ಮಂತ್ರಾ – ಯಾಸ್ಕನು ಇಂತಹ ವಿರೋಧಿಗಳಿಗೆ ಅರ್ಹವೂ ಸೂಕ್ತವೂ ಆದ ಉತ್ತರವನ್ನು ನೀಡಿದರೂ ಅನುಷ್ಠಾನವರರಲ್ಲಿ ಮಂತ್ರಗಳು ತಮ್ಮ ಅರ್ಥವನ್ನು ಕಳೆದುಕೊಂಡವು ಅವರು ಅವುಗಳ ಅರ್ಥವನ್ನು ತಿಳಿಯದೆಯೇ ವಠಿಸುತ್ತಿದ್ದರು ವುರಾಣವರಂವರೆಗಳ ವರಿರಕ್ಷಕನೆಂದು ಭಾವಿಸಲ್ಪಟ್ಟ ಬ್ರಹ್ಮನನ್ನು ಸಂಸ್ಕೃತ ಮಹಾಕಾವ್ಯಕಾರರು ವೇದಾಭ್ಯಾಸ ಜಡ ಮತಿಯೆಂದು ಕರೆದಂತೆಯೇ ಇಂತಹ ವೇದವಾಠಿಗಳನ್ನು ಕರೆಯತೊಡಗಿದರು ಇಂತಹ ಹೀನಾಯವಾದ ವಿಶೇಷಣಗಳೊಂದಿಗೆ ವೈದಿಕರನ್ನು ಕರೆಯುವ ವರಿಸ್ಥಿತಿ ಒದಗಿದ್ದು ವಿಷಾದಕರವೇ ಆದರೂ ಈ ವರಿಸ್ಥಿತಿಗೆ ಅವರೇ ತಕ್ಕಮಟ್ಟಿಗೆ ಕಾರಣರಾಗಿದ್ದರು

ಇಷ್ಟೇ ಅಲ್ಲ ವೈದಿಕ ಭಾಷೆ ವದಗಳ ಅರ್ಥವನ್ನು ಸ್ಪಷ್ಟ ವಡಿಸಲು ಬೆಳೆಸಿಕೊಂಡಿದ್ದ ಅವಧಾರಣೆಯ ಉಚ್ಚಾರಣಾ ವದ್ಧತಿ ತನ್ನ ಮೂಲ ಭಾವಕೋಶವನ್ನು ಕಳೆದುಕೊಂಡು ತಲೆ ಕೈ ಬೆರಳುಗಳ ಅಲುಗಾಟ ಮಾತ್ರವಾಯಿತು ಈ ಮಧ್ಯಕಾಲದಲ್ಲಿ ವೇದಭಾಷೆ ವರಣ ವಿಷಯದಲ್ಲಿ ಬಹಳ ವ್ಯತ್ಯಾಸವಾಗಿದ್ದುದರಿಂದ ವ್ರಾಚೀನ ಅವಧಾರಣಾ ಪದ್ಧತಿಯನ್ನು ಕಾಲಗರ್ಭದಲ್ಲಿ ಸೇರದಂತೆ ರಕ್ಷಿಸಲು ಈ ವ್ರಯತ್ನ ಮಾಡಲಾಯಿತು ಎಂಬುದರಲ್ಲಿ ಸಂದೇಹವಿಲ್ಲವಾದರೂ, ಸೂಕ್ತವಾದ ವೈದಿಕ ಉಚ್ಚಾರಣಾಶಾಸ್ತ್ರದ ಅಭಾವದಿಂದಾಗಿ ಯಥಾ ವಾಣಿ ತಥಾ ವಾಣಿಯ ಈ ಹೊಸ ವದ್ಧತಿಯಿಂದಲೂ ವೇದಗಳನ್ನು ಹೆಚ್ಚು ಹೆಚ್ಚು ದುರವಗಾಹ್ಯಗಳಾಗುವುದರಿಂದ ತಪ್ಪಿಸಲಾಗಲಿಲ್ಲ ಏನೇ ಆದರೂ ಈ ಕಾಲದಲ್ಲೂ ವಿವಿಧ ಕೋನಗಳಿಂದ ವೇದ ಮಂತ್ರಗಳನ್ನು ವಿವರಿಸುವ ವ್ರಯತ್ನ ಕೆಲವು ಆಚಾರ್ಯರಿಂದಾಯಿತು ಇದರಿಂದಾಗಿ ವೈದಿಕ ವ್ಯಾಖ್ಯಾನಗಳ ವಿವಿಧ ವಂಥಗಳುಂಟಾದವು ಯಾಸ್ಕನು ಹತ್ತಕ್ಕಿಂತ ಕಡಮೆಯಾಗದ ಇಂತಹ ವಂಥಗಳನ್ನು ಹೆಸರಿಸಿದ್ದಾನೆ ಅಧಿಯಜ್ಞ ಆಧಿದೈವತ ಆಧ್ಯಾತ್ಮ ವರಿವ್ರಾಜಕ ಆರ್ಷ ವೈಖುಕ್ತ ನೈದಾನ ವೈಯ್ಯಾಕರಣ ಐತಿಹಾಸಿಕ ಹಾಗೂ ಆಖ್ಯಾನ ಇವೆಲ್ಲವೂ ವೇದಗಳನ್ನು ವಿವಿಧಕೋನಗಳಿಂದ ಅಧ್ಯಯನ ಮಾಡಿದವೇ ಆದರೂ ನಂತರದ ಕಾಲದಲ್ಲಿ ಪ್ರತಿವಂಥದ ವೀರಾಭಿಮಾನಿಗಳೂ ವೈದಿಕ ಖುಷಿಗಳ ಭಾವನಾ ಮೂಲ ರೂಪಕ್ಕೆ ತಮ್ಮ ದೃಷ್ಟಿಕೋನದ ವಿವರಣೆಯೇ ಬಹಳ ಹತ್ತಿರವೆಂದು ಉದ್ಘೋಷ ಮಾಡಿ ಪ್ರಬಂಧೀಕರಿಸಿದರು

ವೇದಗಳ ಅಧ್ಯಯನಕ್ಕೆ ನೆರವೀಯ ಬಲ್ಲ ಹೊಸರೀತಿಯ ವೇದಾಂಗವೆಂಬ ಸಾಹಿತ್ಯವೂ ಈ ಕಾಲದಲ್ಲೇ ಉಂಟಾಯಿತು ಶಿಕ್ಷಾ ವ್ಯಾಕ

# ಸಾಮವೇದ ಸಾಹಿತ್ಯ ಪ್ರಕಾಶನ

**ಶ್ರೀಮತಿ ಸುಚೇತಾ ಪರಾಂಜಪೆ ವೂನಾ**

ಜಗತ್ತಿನಾದ್ಯಂತ ವಂಡಿತರ ಗಮನವನ್ನು ವೇದಗಳು ಎಲ್ಲ ಕಾಲದಲ್ಲೂ ಆಕರ್ಷಿಸಿವೆ ಅವುಗಳ ಸಾಹಿತ್ಯಕ ಮೌಲ್ಯ ತಾತ್ವಿಕ ಅಂತರಂಗ ಧಾರ್ಮಿಕ ವ್ರಾಮುಖ್ಯ ಹಾಗೂ ಅವುಗಳಲ್ಲಿನ ಭಾಷಾಶಾಸ್ತ್ರ ಹಾಗೂ ವ್ಯಾಕರಣ ವಿವರಗಳು ಅರ್ವಾಚೀನ ಕಾಲದಲ್ಲೂ ಅವುಗಳ ಅಧ್ಯಯನಕ್ಕೆ ಕಾರಣಗಳಾಗಿವೆ

ವೈದಿಕ ವಿದ್ವಾಂಸರ ಸೂಕ್ತ ಆಸಕ್ತಿಯನ್ನು ಋಗ್ವೇದ ಯಜುರ್ವೇದಗಳು ವಡೆದಿರುವುದಾದರೂ ಈ ವಿದಾಂಸರ ನಿರಾಸಕ್ತಿಗೆ ನಿರಾದರಣೆಗೆ ಸಾಮವೇದ ಗುರಿಯಾಗಿದೆ

ಸಾಮವೇದಕ್ಕೆ ಒಂದು ಸಾವಿರ ಶಾಖೆಗಳಿವೆಯೆಂದು ವರಂವರೆ ತಿಳಿಸಿದರೂ ಸಧ್ಯಕ್ಕೆ ಮೂರು ಶಾಖೆಗಳು ಮಾತ್ರ – ಕೌಥುಮ ರಾಣಾಯನೀಯ ಜೈಮಿನೀಯಃ – ಉವಲಬ್ಧವಾಗಿವೆ ಇವುಗಳಲ್ಲಿ ಕೌಥುಮ ರಾಣಾಯನೀಯ ಶಾಖೆಗಳಲ್ಲಿ ವರಸ್ವರ ಭೇದ ಬಹಳವಿಲ್ಲ ಉವಲಬ್ಧವಾದ ಬಹುತೇಕ ಗ್ರಂಥಗಳು ಈ ಶಾಖೆಗಳಿಗೆ ಸಂಬಂಧಿಸಿದವು ಈ ಶಾಖೆಯ ಸಂಹಿತೆ ಅದರ ಗಾನ ಗ್ರಂಥದೊಡನೆ ವ್ರಕಟವಾಗಿದೆ ಈ ಶಾಖೆಯ ಬಹುಮುಖ್ಯ ಬ್ರಾಹ್ಮಣವಾದ ತಾಂಡ್ಯ ಮಹಾಬ್ರಾಹ್ಮಣ ಭಾಷಾಂತರವಾಗಿ ವ್ರಕಟವಾಗಿದೆ ಬ್ರಾಹ್ಮಣಗ್ರಂಥಗಳೆಂದು ಹೇಳಲ್ಪಡುವ ಅನೇಕ ಗ್ರಂಥಗಳು ಈ ಶಾಖೆಗೆ ಸೇರಿದ್ದು ವ್ರಾಯಶ ಎಲ್ಲ ವ್ರಕಟವಾಗಿವೆ

ಶ್ರೌತ ಸೂತ್ರಗಳೆಂದೂ ಗೃಹ್ಯಸೂತ್ರಗಳೆಂದೂ ಸೂತ್ರದ ಹಂತದಲ್ಲಿ ವ್ರತಿಶಾಖೆಯೂ ಗ್ರಂಥಗಳನ್ನು ಹೊಂದಿದ್ದು ಇವೆಲ್ಲ ವ್ರಕಟವಾಗಿವೆ

ಜೈಮಿನೀಯ ಶಾಖೆಗೆ ಬರುವಲ್ಲಿ ಚಿತ್ರ ತೀವ್ರವಾಗಿ ವರಿವರ್ತಿತವಾಗುತ್ತದೆ ಜೈಮಿನೀಯ ಬ್ರಾಹ್ಮಣ ಹಾಗೂ ಸಂಹಿತೆಗಳು ವ್ರಕಟವಾಗಿದ್ದರೂ, ಅವುಗಳ ಅಧ್ಯಯನ ಗಂಭೀರವಾಗಿ ನಡೆದಿಲ್ಲ – ಕಾರಣ ಜೈಮಿನೀಯ ಬ್ರಾಹ್ಮಣದ ಬಗ್ಗೆ ಈವರೆಗೆ ಯಾವುದೇ ವ್ಯಾಖ್ಯನವೂ ಉವಲಬ್ಧವಿಲ್ಲ ಜೈಮಿನೀಯ ಗೃಹ್ಯಸೂತ್ರ ಬಹುಹಿಂದೆಯೇ ವ್ರಕಟವಾಗಿದ್ದರೂ ಶ್ರೌತಸೂತ್ರ ವ್ರಕಟವಾಗಿಲ್ಲ ಅದರ ಒಂದು ಭಾಗ ಮಾತ್ರ ವ್ರಕಟವಾಗಿದೆ ಆದರೆ ಈಗ ಇಡೀ ಸೂತ್ರದ ಬಗ್ಗೆ ವ್ಯಾಖ್ಯಾನ ದೊರೆತಿದ್ದು ಜೈಮಿನೀಯ ಶ್ರೌತಸೂತ್ರವನ್ನು ಅದರ ಇತರ ಉವಗ್ರಂಥಗಳೊಡನೆ ವ್ರಕಟಿಸಬೇಕಾದ ಅಗತ್ಯ ಕೆಲಸ ನಡೆಯಬೇಕಿದೆ ಇದರಿಂದಾಗಿ ಜೈಮಿನೀಯ ಆಚಾರಗಳನ್ನು ಅರಿಯುವಲ್ಲಿ ತುಂಬ ಉವಕಾರವಾಗುತ್ತದೆ

## ತಿರುಮಲೆ ತಿರುಪತಿ ದೇವಸ್ಥಾನಗಳು,
## ತಿರುಪತಿ

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ ತಿ ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿದೆ

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು ಇದಕ್ಕಾಗಿ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ ಪಂಚಲೋಹ ವಿಗ್ರಹಗಳನ್ನೂ 50 ಶತಾಂಶ ರಿಯಾಯಿತಿಯಲ್ಲಿ ಒದಗಿಸಲಾಗುವುದು ಇದಕ್ಕಾಗಿಯೂ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯರ್ಥಿಗಳಿಗೇ ಸೇರಿದ್ದು

ಕಾಲದಿಂದ ಕಾಲಕ್ಕೆ ತಿ ತಿ ದೇ ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ-

**ಕಾರ್ಯನಿರ್ವಹಣಾಧಿಕಾರಿ, ತಿ ತಿ ದೇ ತಿರುಪತಿ 517 501**

# ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ ಓ ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ ತಿ ದೇ ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ ತಿ ದೇ ತಿರುಪತಿ ಇವರ ಹೆಸರಿನಲ್ಲಿ ಡಿ ಡಿ ಯನ್ನು ಕಳುಹಿಸಬೇಕು ಡಿ ಡಿ ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್**
(ರಿಸೆಪ್ಷನ್) ತಿ ತಿ ದೇ ತಿರುಪತಿ

ರಣ ಛಂದಸ್ ನಿರುಕ್ತ ಕಲ್ಪ ಜ್ಯೋತಿಷಗಳೆಂಬ ಆರು ವಿಭಾಗಗಳಲ್ಲಿ ಹರಡಿದ ವೇದಾಂಗಗಳ ಪರಿಕಲ್ಪನೆಯಿಂದಾಗಿ ವೈದಿಕ ಅಧ್ಯಯನದಲ್ಲಿ ಹೊಸ ನೋಟಗಳುಂಟಾದವು ವೇದಗಳ ವಿವಿಧ ಶಾಖೆಗಳ ಬೆಳವಣಿಗೆಯಿಂದಾಗಿ ಭಾಷಿಕವಾಗಿಯೂ ಪ್ರಾಂತೀಯ ಭೇದಗಳಿಂದಾಗಿಯೂ ವಿವಿಧ ರೀತಿಯಲ್ಲಿ ಪರಿವರ್ತನೆ ಹೊಂದಿದ್ದ ವೇದಭಾಷೆಯ ಅಧ್ಯಯನಕ್ಕೆ ಶಿಕ್ಷಾ (ಪ್ರಾತಿಶಾಖ್ಯಗಳೊಡನೆ) ಶಾಸ್ತ್ರ ತೊಡಗಿತು ಹಳತಾಗಿ ರೂಪದಲ್ಲೂ ಬಳಕೆಯಲ್ಲೂ ಹಳತಾಗುತ್ತಿದ್ದ ಪದಗಳ ವೈದಿಕ ಭಾಷೆಯ ಸುವ್ಯವಸ್ಥಿತ ರೂಪವನ್ನು ವ್ಯಾಕರಣ ಉದ್ದೇಶಿಸಿತು ಛಂದಸ್ಸು ವೈದಿಕ ಮಂತ್ರಗಳ ರಚನೆಯಲ್ಲಿನ ತಾಂತ್ರಿಕತೆಯ ಅಧ್ಯಯನಕ್ಕೆ ನೆರವು ನೀಡಿತು ನಿರುಕ್ತ ಪದಗಳ ಮೂಲಾರ್ಥವನ್ನು ಅವುಗಳ ವ್ಯುತ್ಪತ್ತಿ ಶಾಸ್ತ್ರದ ಆಧಾರದಿಂದ ಸ್ಪಷ್ಟಗೊಳಿಸಲು ಪ್ರಯತ್ನಿಸಿತು ನಿತ್ಯ ಜೀವನದಲ್ಲೂ ಯಜ್ಞಕಾಲದಲ್ಲೂ ಯಜ್ಞ ಮಾಡುವವನು ನಡೆಯಬೇಕಾದ ನೀತಿಗಳನ್ನೂ ಯಜ್ಞ ಕ್ರಿಯೆಗಳ ವಿವಿಧ ರೂಪಗಳನ್ನೂ ಶ್ರೌತ ಗೃಹ್ಯ ಧರ್ಮ, ಶುಲ್ಬ ಸೂತ್ರಗಳ ಮೂಲಕ ನಿರೂಪಿಸಲು ಕಲ್ಪವು ಉದ್ದೇಶಿಸಿತು ವೇದಾಂಗದ ಈ ವಿಭಾಗವು ಭಾರತದ ಸಾಂಸ್ಕೃತಿಕ ಚರಿತ್ರೆಯ ದೃಷ್ಟಿಯಿಂದ ಹೆಚ್ಚು ಪ್ರಾಧಾನ್ಯವಡೆಯುತ್ತದೆ ಜ್ಯೋತಿಷ್ಯದ ಗುರಿ - ಒಂದು ಬಿಂದುವಿನಿಂದ ಮತ್ತೊಂದು ಬಿಂದುವಿಗೆ ಚಲಿಸುವಾಗ ಗ್ರಹಗಳು ಮನುಷ್ಯ ಜೀವನದ ಮೇಲುಂಟು ಮಾಡುವ ಒಳ್ಳೆಯ ಅಥವಾ ಕೆಟ್ಟ ಪರಿಣಾಮಗಳ ಅಧ್ಯಯನ ಯಜ್ಞವನ್ನು ಜ್ಯೋತಿಷ್ಯ ಶಾಸ್ತ್ರದಲ್ಲಿ ಹೇಳಿರುವಂತೆ ಸುಸಮಯದಲ್ಲಿ ನಡೆಸಿದರೆ ನಡೆಸಿದಾತನಿಗೆ ಒಳ್ಳೆಯದಾಗುವುದು ಖಂಡಿತ

ವೇದಗಳ ಅಧ್ಯಯನದಲ್ಲಿ ವೇದಾಂಗಗಳು ಪ್ರಮುಖ ಉಪಾಂಗಗಳೇನೋ ಹೌದು ಹಾಗಾಗಿ ಅವುಗಳನ್ನು ಉಪಾಂಗಗಳಾಗಿಯೇ ಅಧ್ಯಯನ ನಡೆಸಬೇಕಿತ್ತು ಆದರೆ ಕಾಲಕ್ರಮದಲ್ಲಿ ಅವು ಸ್ವತಂತ್ರ ಅಧ್ಯಯನ ವಿಷಯಗಳಾದವು ಶ್ರೋತ್ರಿಗಳು ಶ್ರೌತ ಸೂತ್ರಗಳನ್ನೂ ಅವುಗಳ ಶಾಖೆಗಳನ್ನೂ ಕಂಠಪಾಠ ಮಾಡಬೇಕಾಗಿ ಬಂದಿತು ಗೃಹ್ಯಸೂತ್ರಗಳು ನಿತ್ಯ ಜೀವನದಲ್ಲೂ ಆಗಾಗ್ಗೆ ಆಚರಿಸುವ ಗೃಹ್ಯ ವ್ರತನಿಯಮಗಳಲ್ಲೂ ಪ್ರಾಯೋಗಿಕವಾದದ್ದರಿಂದ ಅವುಗಳ ಅಭ್ಯಾಸ ನಡೆಯಿತು ನಾಲ್ಕು ವರ್ಣಗಳ ನೀತಿ ನಿಯಮಗಳನ್ನು ಒಳಗೊಂಡಿದ್ದುದರಿಂದ ಧರ್ಮಶಾಸ್ತ್ರಗಳ ಅಧ್ಯಯನ ನಡೆಯಿತು ಸ್ವತಂತ್ರ ವಿಷ

ಯದ ಅಧ್ಯಯನದ ನಿಯಮದಂತೆ ಶ್ರೌತ
ಸೂತ್ರಗಳ ಅಧ್ಯಯನವು ಅವುಗಳ ಮೂಲಾಧಾರ
ವಾದ ಸಂಹಿತೆಗಳನ್ನೂ ಬ್ರಾಹ್ಮಣಗಳನ್ನೂ ಹಿಂದ
ಕ್ಕಿಟ್ಟಿತು ಈಗ ವೇದಗಳ ಹೆಸರಿನಲ್ಲಿ ಶ್ರೌತ
ಗೃಹ್ಯ ಅನುಷ್ಠಾನದಲ್ಲಿ ಕೆಲಸಕ್ಕೆ ಬರುವ ಕೆಲವೇ
ಮಂತ್ರಗಳನ್ನು ಕಲಿಯುವ ಪರಿಪಾಠವುಂಟಾಯಿತು
ಇಂತಹ ಮಂತ್ರಗಳನ್ನು ಮಂತ್ರಪಾಠಗಳು ಮತ್ತವು
ಗಳ ಶಾಖೆಗಳಲ್ಲಿ ಸಂಗ್ರಹಿಸಲಾಯಿತು ದೇಶದ
ವಿವಿಧ ಭಾಗಗಳಲ್ಲಿ ಆಚರಣೆಯಲ್ಲಿದ್ದ ರೀತಿಗಳ
ಬಗ್ಗೆ ಪ್ರಯೋಗ ಗ್ರಂಥಗಳು ಪ್ರವರ ಸೂತ್ರಗಳು
ಪ್ರಾಯಶ್ಚಿತ್ತಗಳು ಶ್ರಾದ್ಧ ಸೂತ್ರಗಳು ಆಚಾರ್ಯ
ರಿಂದ ಸಂಗ್ರಹಿತವಾದವು ವೈವಿಧ್ಯಮಯ ಅನು
ಷ್ಠಾನ ಸಾಹಿತ್ಯದ ಅಭಿವೃದ್ಧಿ ಆಗತೊಡಗಿದಂತೆ
ಪ್ರತ್ಯೇಕವಾದ ವೇದಾಧ್ಯಯನ ಕಾಲಕ್ರಮದಲ್ಲಿ ಇಳಿ
ಮುಖವಾಗತೊಡಗಿತು

ಪುರಾಣಗಳ ಏಳ್ಗೆಯೊಂದಿಗೆ – ಪುರಾಣಗಳ
ನೆರವಿನಿಂದ ವೇದಗಳ ಅಧ್ಯಯನ ನಡೆಯಬೇ
ಕೆಂಬ ಪರಿಕಲ್ಪನೆ ಬೆಳೆಯತೊಡಗಿತು ಕಾರಣ
ಪುರಾಣಗಳು ವೇದಗಳ ಸರ್ವೋತ್ತಮ ವ್ಯಾಖ್ಯಾ
ನವಾಗಿದ್ದದ್ದು ಮಹಾಭಾರತ ಈ ಉಪಾಯವನ್ನು
ಹರಡಿತು

ಇತಿಹಾಸ ಪುರಾಣಾಭ್ಯಾಂ
ವೇದಂ ಸಮುಪಬೃಂಹಯೇತ್
ಬಿಭೇತ್ಯಲ್ಪ ಶ್ರುತಾದ್ ವೇದೋ
ಮಾಮಯಂ ಪ್ರಹರಿಷ್ಯತಿ

ವೇದಗಳಲ್ಲಿ ಮಾತ್ರವೇ ಉಲ್ಲೇಖಿಸಲ್ಪಟ್ಟ ಎಲ್ಲ
ಪರಿಕಲ್ಪನೆಗಳು, ಉಪಾಯಗಳು ಪುರಾಣಗಳಲ್ಲಿ
ಪರಿಪೂರ್ಣವಾಗಿ ವಿವರಿಸಲ್ಪಟ್ಟಿದ್ದರಿಂದ ಪುರಾ
ಣಗಳ ನೆರವಿನಿಂದ ವೇದಗಳನ್ನು ಅಧ್ಯಯನ
ಮಾಡುವುದು ಸೂಕ್ತವಾಗಿಯೇ ಇದ್ದಿತು ಆದರೆ
ಈ ರೀತಿಯಿಂದ ಉಂಟಾದ ವಿಪರೀತವೆಂದರೆ ಈ
ಕಲ್ಪನೆಯಿಂದಾಗಿ ಜನರು ವೇದಗಳ ಅಧ್ಯಯ
ನದ ಫಲವನ್ನು ಪುರಾಣಾಧ್ಯಯನದಿಂದಲೇ ಪಡೆ
ಯಬಹುದೆಂದು ಭಾವಿಸಿದ್ದು ವೇದಕಲ್ಪತರುವಿನ
ಪಕ್ವಫಲದಿಂದ ಹರಿಯುವ ಅಮೃತ ಬಿಂದುವಿ
ನೊಡನೆ ಕೂಡಿದ ರಸ ಝರಿ ಶ್ರೀಮದ್ಭಾಗವತ
ಎಂದು ಆದರಿಸಲ್ಪಟ್ಟಿತು

ನಿಗಮ ಕಲ್ಪ ತರೋರ್ಗಲಿತಂ ಫಲಂ
ಶುಕಮುಖಾದಮೃತದ್ರವ ಸಂಯುತಮ್
ಪಿಬತ ಭಾಗವತಂ ರಸಮಾಲಯಂ
ಮುಹುರಹೋ ರಸಿಕಾ ಭುವಿಭಾವುಕಾ

ಶ್ರೀಮದ್ಭಾಗವತವೇ ವೇದಕಲ್ಪತರು ಫಲದ
ರಸವಾದಾಗ ಯಾರು ತಾನೇ ವೇದಗಳ ಅಧ್ಯ
ಯನಕ್ಕೆ ತೊಡಗಿಯಾರು? ಜೊತೆಗೇ ಪುರಾಣಗಳ
ಭಾಷೆಯೂ ವೇದಗಳ ಭಾಷೆಗಿಂತ ಸುಲಭವಾಗಿ
ಅರ್ಥವಾಗುವಂತೆಯೂ ಇದ್ದಿತು ಹಾಗಾದಾಗ
ಕಠಿಣವಾದ ಭಾಷೆಯ ವೇದಗಳನ್ನು ಓದಲು ಕಷ್ಟ
ಪಡಬೇಕೇಕೆ? ಈ ರೀತಿಯ ಯೋಚನೆಯಿಂ
ದಾಗಿ ವೇದಗಳ ಅಧ್ಯಯನ ಕಡಮೆಯಾಗುತ್ತ
ಪುರಾಣ ಮಹಾಕಾವ್ಯಗಳ ಅಧ್ಯಯನ ಜನಪ್ರಿ
ಯವಾಗತೊಡಗಿತು ಇಷ್ಟೇ ಅಲ್ಲದೆ ವೈದಿಕ ಅನು
ಷ್ಠಾನಗಳೂ ಯಜ್ಞಗಳೂ ಪೌರಾಣಿಕ ಅನುಷ್ಠಾನ
ವ್ರತಗಳಿಗೆ ಎಡೆಮಾಡಿಕೊಟ್ಟವು ಏಳುದಿನಗಳಲ್ಲಿ
ಶ್ರೀಮದ್ಭಾಗವತದ ಪಾರಾಯಣ – ಸಪ್ತಾಹಯಜ್ಞ
– ಪಿತೃಮೇಧಯಜ್ಞದ ಬದಲಿಗೆ ಹೆಚ್ಚು ಜನ
ಪ್ರಿಯವಾಯಿತು ಗರುಡ ಪುರಾಣ ಪಾರಾ
ಯಣ ಪ್ರಚಲಿತವಾಯಿತು ಇಂದಿಗೂ ಉತ್ತರ
ಭಾರತದಲ್ಲಿ ಗರುಡ ಪುರಾಣ ಪಾರಾಯಣವೂ
ಸಪ್ತಾಹಯಜ್ಞವೂ ಅತಿ ಸಾಮಾನ್ಯವಾಗಿವೆ ಕ್ರಿ ಶ
ಐದನೇ ಶತಕದಿಂದ ಕ್ರಿ ಶ 18ನೇ ಶತಕದ ವರೆ
ಗಿನ ಕಾಲವು ಪೌರಾಣಿಕ ಚಿಂತನೆ ಉಪಾಯಗ
ಳಿಂದ ಪ್ರಾಭಾವಿತವಾದ ವ್ಯಾಖ್ಯಾನಗಳು ಆಚಾರ
ಸಂಹಿತೆಗಳು ಕಲಿವರ್ಜ್ಯಗಳ ರಚನೆಯನ್ನು ಸೂಚಿ
ಸುತ್ತದೆ ವೈದಿಕ ಅನುಷ್ಠಾನಗಳ ಇಳಿಮುಖತೆಗೆ
ಕಲಿವರ್ಜ್ಯಗಳು ಸಾಕ್ಷಿಗಳಾದವು ಅನೇಕ ಹೊಸ
ಆಚಾರಗಳು – ಚಂಡಿಹೋಮ ವಿಷ್ಣುಯಾಗ
ರುದ್ರಯಾಗ ಮೊದಲಾದವು – ಶ್ರೌತ ವಿಧಿಗಳ
ಸ್ಥಾನವನ್ನು ಪಡೆದವು ವೇದಗಳ ಕಾಲದಲ್ಲಿ
ಯಜ್ಞವು ವೈದಿಕ ದೇವತೆಗಳ ಆರಾಧನೆಯ
ಸಾಧನವಾಗಿದ್ದಿತು ಪೌರಾಣಿಕ ಹಾಗೂ ಮಧ್ಯ
ಯುಗದಲ್ಲಿ ಆಲಯ ಪೂಜೆಯೇ ಆರಾಧನೆಯ
ಜನಪ್ರಿಯ ರೂಪವಾಯಿತು ಈ ಆಲಯಾರ್ಚನೆ
ವೈದಿಕ ಧರ್ಮಕ್ಕೆ ಪೆಟ್ಟುಕೊಟ್ಟಿತು

ಕಾಳಿದಾಸನ ಮನ ಮೋಹಕ ನವುರಾದ ಭವ್ಯ
ಕಾವ್ಯ ಭವಭೂತಿಯ ಹೃದಯ ತಟ್ಟುವ ಕಾವ್ಯ
ಹರ್ಷ ಮಾಘ ಭಾರವಿಗಳ ಅತ್ಯುನ್ನತ ಕುಸುರಿ
ಗೆಲಸದ ಕಾವ್ಯಕಲೆಗಳಿಂದಾಗಿ ವೈದಿಕ ಅಧ್ಯಯನ
ಮತ್ತಷ್ಟು ಇಳಿಮುಖವಾಯಿತು ವೇದಗಳನ್ನು
ಗುರುವಿನ ಆದೇಶವೆಂದು ಬಗೆಯಲಾಯಿತು –
ಗುರುಸಂಹಿತೋಪದೇಶ ಪುರಾಣಗಳನ್ನು ಗೆಳೆ
ಯನ ಸಲಹೆಯೆನ್ನಲಾಯಿತು – ಸುಹೃತ್ ಸಂಹಿ
ದೋಪದೇಶ ಕಾವ್ಯಗಳನ್ನು ಪ್ರಿಯೆಯ ಸಿಹಿ ಸಲ್ಲಾ
ಪವೆನ್ನಲಾಯಿತು ಕಾಂತಾ ಸಂಹಿತ – ಉಪದೇಶ
ಹಾಗಾಗಿ ಬ್ರಹ್ಮಾನಂದ ಸಹೋದರವೆಂದು ಪರಿಗ
ಣಿಸಲಾದ ರಸಾನಂದವನ್ನು ಪಡೆಯಲು ಕಾವ್ಯವೇ
ಆಧಾರವೆಂದು ಬಗೆಯಲಾಯಿತು ಕಾವ್ಯಾಧ್ಯಯ
ನದಿಂದ ಪಡೆಯತಕ್ಕ ರಸವನ್ನು ಇಷ್ಟು ಪ್ರಮುಖ
ಸ್ಥಾನಕ್ಕೆ ಏರಿಸಿದ ಮೇಲೆ ಜನ ವೈದಿಕ ಅಧ್ಯಯ
ನಕ್ಕೆ ವಿಮುಖರಾಗುವುದು ಸಹಜವೇ

ವೇದಗಳು ವಾಗ್ಮಿಗಳಿಂದ ಮಾತ್ರವೇ ಹೀಗಳೆ
ಯಲ್ಪಟ್ಟಿದ್ದಲ್ಲ ನಂತರದ ತತ್ವಶಾಸ್ತ್ರಜ್ಞರಿಂದಲೂ
ಹೀಗಳೆಯಲ್ಪಟ್ಟವು ಭಾರತೀಯ ತತ್ವಶಾಸ್ತ್ರದ
ಆರು ದರ್ಶನಗಳನ್ನು ಸ್ಥಾಪಿಸಿದವರಲ್ಲಿ ಯಾರೂ
ವೇದಮಾತ್ರವನ್ನು ತಮ್ಮ ಅಧ್ಯಯನದ ಆಧಾ
ರವೆಂದು ಬಗೆಯಲಿಲ್ಲ ಅವರೆಲ್ಲ ವೇದಗಳಲ್ಲಿ
ಒಂದು ವ್ಯವಸ್ಥಿತ ತಾತ್ವಿಕ ಸೂತ್ರವನ್ನು ಕಂಡು
ಕೊಳ್ಳುವಲ್ಲಿ ವಿಫಲರಾದರು ಸಾಂಖ್ಯದರ್ಶನದ
ಮಹತ್ವದ ಪ್ರತಿಪಾದಕ ಈಶ್ವರ ಕೃಷ್ಣ ವೇದಗಳು
ದೃಷ್ಟ ಉಪಾಯಗಳಂತೆ ಜಗತ್ತಿನ ತಾಪತ್ರಯ –
ಆಧ್ಯಾತ್ಮಿಕ ಅದಿದೈವಿಕ ಆದಿ ಭೌತಿಕ ತಾಪ
ಗಳು – ನಿವಾರಣೆ ಎಂದು ಘೋಷಿಸಿದ ಶಂಕರ
ರಂಥ ಉನ್ನತ ತತ್ವಶಾಸ್ತ್ರಜ್ಞರೂ ವೈದಿಕ ಉಪನಿಷ
ತ್ತುಗಳನ್ನೆಲ್ಲ ವಿವರಿಸಿದರೂ ವೇದಗಳ ಸಂಹಿತೆಗ
ಳನ್ನು – ಅವರ ಅಭಿಪ್ರಾಯದಲ್ಲಿ ಇವು ಮೋಕ್ಷ
ಮಾರ್ಗಕ್ಕೆ ಒಯ್ಯದ ಆಚರಣೆ ಅನುಷ್ಠಾನಗಳ
ಬಗ್ಗೆ ಹೇಳುತ್ತವೆಯಾದ್ದರಿಂದ – ತಾಕಲೂ ಇಲ್ಲ
ಋಗ್ವೇದದ ಮೊದಲ ಮಂಡಲದ ಮೊದಲ ನಲ
ವತ್ತು ಋಕ್ಕುಗಳಿಗೆ ವ್ಯಾಖ್ಯಾನ ಬರೆದವರು
ಮಧ್ವಾಚಾರ್ಯರು ಅವರ ಭಾಷ್ಯ (ವಿಷ್ಣು
ಪರಕ) ವಿಷ್ಣು ತತ್ವನಿರ್ಣಯದಂತೆ ವಿಷ್ಣುವೇ
ಪರಮಪುರುಷ ಶಾಂಕರ ವೇದಾಂತದ ಅನು
ಯಾಯಿ ಆತ್ಮಾನಂದರು ಋಗ್ವೇದದ ಅಶ್ಯವಾ
ಮಿಾಯ ಸೂಕ್ತದ ಬಗ್ಗೆ (1–164) ಮಾತ್ರ ವಿವ
ರಣೆ ನೀಡಿದ್ದಾರೆ ಭಾರತೀಯ ತತ್ವಶಾಸ್ತ್ರದ ಷಡ್ದ
ರ್ಶನಕಾರರು ಈ ರೀತಿಯಲ್ಲಿ ಸಂಹಿತೆಗಳನ್ನೂ
ಬ್ರಾಹ್ಮಣಗಳನ್ನೂ ಕರ್ಮಕಾಂಡ ಸಂಬಂಧಿಗ
ಳೆಂದು ಹೀಗಳೆದದ್ದರಿಂದ ಈ ಪಂಥಗಳ ಅನು
ಯಾಯಿಗಳು ವೇದಗಳ ಅಧ್ಯಯನವನ್ನು ಅಲ
ಕ್ಷಿಸಲು ಕಾರಣವಾಯಿತು

ಹೀಗೆ ಮಧ್ಯಯುಗದಲ್ಲಿ ತತ್ವಶಾಸ್ತ್ರದ ಹಲವು
ಶಾಖೆಗಳ ಅಧ್ಯಯನಕ್ಕೆ ಇಡೀ ಜೀವನವನ್ನು
ಮಿಾಸಲಿಟ್ಟ ಅನೇಕ ವಿದ್ವಾಂಸರನ್ನು ಕಾಣಬಹು
ದಾದರೂ ವೇದಗಳ ಅಧ್ಯಯನಕ್ಕೆ ಮಿಾಸಲಾದ
ವಿದ್ವಾಂಸರನ್ನು ಕಾಣಲಾರೆವು ಭಾರತೀಯ ವಿದ್ವ
ತ್ತೆಯ ಮಾದರಿ ಈ ಉಪೇಕ್ಷೆ ಪಂಡಿತ ಮೋತಿ
ಲಾಲ್ ಶಾಸ್ತ್ರಿಯವರು "ವೇದಗಳು ಸಾಮ್ರಾಟ

ನಂತೆ ಚಕ್ರವರ್ತಿಯ ಸ್ಥಾನದಲ್ಲಿದ್ದರೆ ವೇದಾಂಗಗಳು ಸಾಮಂತಗಣದಂತೆ ಅಧೀನ ಸ್ಥಾನದಲ್ಲಿವೆ ವಿದ್ವಾಂಸರು ಸಾಮಂತಗಣದ ಸೇವೆಯಲ್ಲಿ ಇಡೀ ಜೀವನವನ್ನು ಕಳೆದು ತಮ್ಮ ಸಾಮ್ರಾಟನನ್ನು ಅಲಕ್ಷಿಸಿ ಹೀಗಳೆಯುವುದು ಎಂತಹ ವಿವರ್ಯಾಸ" ಎಂದಿರುವುದು ಸೂಕ್ತವಾಗಿದೆ ವೇದಗಳ ವ್ರಾಮುಖ್ಯವನ್ನು ಬಿತ್ತರಿಸಿ ಅವುಗಳ ಅಧ್ಯಯನದ ಬಗ್ಗೆ ಉವೇಕ್ಷಿಸುವುದು ನಿಜಕ್ಕೂ ವಿರೋಧಾಭಾಸ

ವೇದಾಧ್ಯಯನದ ಇಂದಿನ ಸ್ಥಿತಿಯನ್ನು ಗಮನಿಸಿದರೆ ವೈದಿಕ ವಿದ್ವತ್ತೆ ಇಳಿಮುಖವಾಗುತ್ತಿರುವುದೂ ವೈದಿಕ ವಿದ್ವಾಂಸರ ಸಂಖ್ಯೆ ವ್ರತಿವರ್ಷ ಕಡಮೆಯಾಗುತ್ತಿರುವುದೂ ಕಂಡುಬರುತ್ತದೆ ಸಾಮಾಜಿಕ ಧಾರ್ಮಿಕ ಕಾರಣಗಳಿಂದಾಗಿ ವೌರಾಣಿಕರ, ತತ್ವಶಾಸ್ತ್ರಜ್ಞರ ವಾಗ್ಮಿಗಳ ಉವೇಕ್ಷಾ ಧೋರಣೆ, ಜೊತೆಗೇ ನಿರಂತರವಾದ ವರದೇಶೀ ಧಾಳಿಗಳಿದ್ದರೂ ವಿದ್ವಾಂಸರು ವೇದಗಳನ್ನು ಮುಖೋಕ್ತ ವರಂವರೆಯಲ್ಲಿ ವರಿರಕ್ಷಿಸಿದರು ಬ್ರಾಹ್ಮಣರ ಅನೇಕ ಕುಟುಂಬಗಳು ದೇಶದ ದಕ್ಷಿಣ ಭಾಗಕ್ಕೆ ವಲಸೆ ಬರಬೇಕಾಗಿ ಬಂದಿತು ಇಲ್ಲಿ ಅವರು ತಮ್ಮ ಶಾಖೆಗಳ ಅಧ್ಯಯನವನ್ನು ಮುಂದುವರೆಸಿದರು 19ನೇ ಶತಕದ ಮೊದಲ ಇವ್ವತ್ತೈದು ವರ್ಷಗಳ ವರೆಗೆ ಋಗ್ವೇದ (ಶಾಕಲ) ಶಾಖ್ಯಾಧ್ಯಯನ, ಸಾಮವೇದ (ಕೌಥುಮ, ಜೈಮಿನೀ,) ಶುಕ್ಲ ಯಜುರ್ವೇದ (ಮಾಧ್ಯಂದಿನ ಹಾಗೂ ಕಾಣ್ವ) ಕೃಷ್ಣ ಯಜುರ್ವೇದ (ತೈತ್ತಿರೀಯ) ಅಥರ್ವವೇದ (ಶೌನಕ) ಶಾಖಾಧ್ಯಯನ ವೂರ್ಣಗೊಳಿಸಿದ ವೈದಿಕರನ್ನು ಕಾಣಬಹುದಾಗಿದ್ದಿತು ಅವರುಗಳು ವಿಕೃತಿಯಲ್ಲೂ ಫನವಾರದಲ್ಲೂ ನಿಷ್ಣಾತರಾಗಿದ್ದವರೇ ಅಲ್ಲದೆ ವೇದಾಂಗಗಳನ್ನು ಕಂಠವಾಠ ಮಾಡಿರುವುದನ್ನು ಕಾಣಬಹುದಿತ್ತು ಆದರೆ ಇಂದು, ವಿಶೇಷವಾಗಿ ಸ್ವಾತಂತ್ರ್ಯಾನಂತರ ಅಂತಹ ಒಬ್ಬ ವೈದಿಕನನ್ನಾದರೂ ಕಾಣುವುದು ಕಷ್ಟವಾಗಿದೆ

ತಂದೆಯಿಂದ ಮಗನಿಗೆ ಗುರುಶಿಷ್ಯ ವರಂವರೆಯಲ್ಲಿ ಸಾವಿರಾರು ವರ್ಷಗಳಿಂದ ಮೌಖಿಕವಾಗಿ ಹರಿದು ಬಂದ ವೈದಿಕ ಶಿಕ್ಷಣದ ಕೊಂಡಿ ಬಹುತೇಕ ಕಳಚಿ ಹೋಗಿದೆ ವೈದಿಕನ ಮಗ ಇಂದು ತಂದೆಯ ವರಂವರೆಯನ್ನು ಅನುಸರಿಸುತ್ತಿಲ್ಲ ವೈದಿಕ ವರಿಕಲ್ಪನೆ – ಅನುವ್ರತಃ ಪಿತ॰ ಪುತ್ರಃ (ಅ ವೇ -3- -30–7) – ಎಂಬುದು ವೂರ್ಣವಾಗಿ ನಾಶವಾಗಿದೆ ಈ ವಿಷಾದಕರ ವರಿಸ್ಥಿತಿಗೆ ವಾಶ್ಚಾತ್ಯ ಸಂಸ್ಕೃತಿಯ ವ್ರಭಾವದಿಂದಾದ ಸಾಮಾಜಿಕ ಉತ್ಕ್ರಾಂತಿಯೂ, ಭಾರತದ ಇಂದಿನ ಆರ್ಥಿಕ ಸ್ಥಿತಿಗಳೂ ಕಾರಣವೆನ್ನಬೇಕು

ವೈದಿಕ ಯಜ್ಞಗಳನ್ನೇ ಆಚರಿಸದ ಈ ಕಾಲದಲ್ಲಿ ವರಂವರಾನುಗತ ವೇದವಾಠದ ಸೂಕ್ತತೆಯೇನು ಎಂಬ ವ್ರಶ್ನೆಯೇಳಬಹುದು ವ್ರತಿವ್ರಶ್ನೆಯೆಂದರೆ ವ್ರಾಚೀನ ಶಿಲೆಗಳು, ಇಟ್ಟಿಗೆಗಳು, ಮಣ್ಣಿನ **ಪಾತ್ರೆ** ವಡಿಗೆ ವ್ರತಿಮೆಗಳು, ಉಡುವುಗಳನ್ನು ಅತಿ ಧನವ್ಯಯದಿಂದಲೂ ಅತಿ ಜಾಗ್ರತೆಯಿಂದಲೂ ಕಾವಾಡುವಾಗ ವೈದಿಕವಾಠಗಳನ್ನೇಕೆ ರಕ್ಷಿಸಬಾರದು? ಭಾರತ ವೇದಗಳ ತವರುಮನೆ ಹಾಗಾಗಿ ವೇದಗಳ ವರಂವರೆಗೆ ಸಂಬಂಧಿಸಿದ್ದನ್ನೆಲ್ಲ ಮುಂದಿನ ತಲೆಮಾರುಗಳಿಗಾಗಿ ಕಾಪಿಡುವುದು ಕರ್ತವ್ಯ ಕಾರಣ ಒಮ್ಮೆ ಇದು ಕಳೆದು ಹೋದರೆ ಮತ್ತೆ ದೊರೆಯುವಂತಹದ್ದಲ್ಲ ಈ ವೇದ ವರಿರಕ್ಷಣಾ ಕರ್ತವ್ಯ ಸಮಾಜ ಹಾಗೂ ಸರ್ಕಾರಗಳೆರಡಕ್ಕೂ ಅನ್ವಯಿಸುತ್ತದೆ ತಮ್ಮ ವಿದ್ವಾಂಸರ, ಬೋಧಕರ ಮೂಲಕ ಸಮಾಜದಲ್ಲಿ ವೈದಿಕ ವರಂವರೆಯ ಬಗ್ಗೆ ಜಾಗ್ರತೆಯನ್ನು ವೈದಿಕ ಸಂಘ ಸಂಸ್ಥೆಗಳು ಮೂಡಿಸಬೇಕಿದೆ ವಿವಿಧ ಶಾಖೆಗಳಿಗೆ ಸಂಬಂಧಿಸಿದ ವೇದವಾಠಿಗಳ ವೇದ ವಠಣವನ್ನು ಚಿತ್ರೀಕರಿಸುವುದು, ಧ್ವನಿ ಮುದ್ರಿಸುವುದು ವೇದ ವರಂವರಾ ವರಿರಕ್ಷಣೆಯ ವ್ರಮುಖ ಮಾರ್ಗಗಳಲ್ಲಿ ಒಂದು ವಿವಿಧ ಸಾಮಾಜಿಕ ಧಾರ್ಮಿಕ ಉತ್ಸವ ಸಮಾರಂಭಗಳಲ್ಲಿ ಧ್ವನಿಸುರುಳಿಗಳನ್ನು ಧ್ವನಿವರ್ಧಕದ ಮೂಲಕ ವ್ರಸಾರ ಮಾಡಬೇಕು ಇಂತಹ ಧ್ವನಿ ಸುರುಳಿಗಳು, ಚಲನ ಚಿತ್ರಗಳು, ಯಾವುದೇ ವೇದವನ್ನು ತರಗತಿಯಲ್ಲಿ ಬೋಧಿಸುವಾಗ ಬಹಳ ಉವಕಾರವಾಗುತ್ತದೆ ಇಂತಹವುಗಳನ್ನು ಶಾಲಾ ಕಾಲೇಜುಗಳಲ್ಲಿ ವಾಠ್ಯ ವೋಷಕಗಳಾಗಿ ವ್ರವೇಶಗೊಳಿಸುವುದು ಅತಿ ಅಗತ್ಯ ಕಾಲೇಜು ಹಂತದಲ್ಲಿ ವಿದ್ಯಾರ್ಥಿಗಳಿಗೆ ಎಲ್ಲ ವೇದಶಾಖೆಗಳ ಧ್ವನಿ ಸುರುಳಿಗಳೂ ಗ್ರಂಥಾಲಯದಲ್ಲಿ ದೊರೆಯುವಂತಿರಬೇಕು ವೇದಗಳನ್ನು ಸ್ತ್ರೀಯರ ಮುಂದೂ ಶೂದ್ರರ ಮುಂದೂ ಹೇಳಬಾರದೆಂಬ ಧೋರಣೆ ಬದಲಾಗಬೇಕು ಇಂದು ಶಾಲಾಕಾಲೇಜುಗಳಲ್ಲಿ ಬಹುತೇಕ ಹೆಣ್ಣು ಮಕ್ಕಳು ಸಂಸ್ಕೃತವನ್ನು ಕಲಿಯುತ್ತಿದ್ದಾರೆ ವೇದ ಮಂತ್ರಗಳನ್ನು ಹೇಳಲು ಅವರನ್ನು ವ್ರೋತ್ಸಾಹಿಸಬೇಕು

ಸಾಮವೇದವು ಸಂಗೀತಕ್ಕೇ ಮೀಸಲಾಗಿದ್ದರೂ ಇತರ ವೇದಗಳೂ ಸಂಗೀತ ಮೌಲ್ಯಗಳನ್ನು ಒಳಗೊಂಡಿವೆ ಹಾಗಾಗಿ ಇತರ ಘರಾನಾ ಸಂಪ್ರದಾಯಗಳ ಸಂಗೀತದಂತೆ ಸಂಗೀತ ಶಿಕ್ಷಣ ವಿಭಾಗಗಳಲ್ಲಿ ಸಾಮಗಾನವನ್ನೂ ಶಾಖಾನುಸಾರವಾಗಿ ಬೋಧಿಸುವಂತೆ ವ್ರವೇಶಗೊಳಿಸಬೇಕು ಸಂಗೀತದ ವಿದ್ಯಾರ್ಥಿಗಳು ವೈದಿಕ ಗಾನಗಳಿಗೆ ಸಂಸ್ಕೃತ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಅವಗಾಹನೆಯನ್ನು ತೋರಿ ನ್ಯಾಯವನ್ನುಂಟು ಮಾಡಬಲ್ಲರು ಇದರಿಂದಾಗಿ ವ್ರಾಚೀನ ವೇದ ವಠನಕ್ಕೆ ವ್ರೋತ್ಸಾಹ ದೊರೆತಂತಾಗುವುದು

# ಯಜುರ್ವೇದ ಹಾಗೂ ಆಧುನಿಕಸಮಾಜ

-ಡಾ|| ಜಿ ಯು ತಿಟ್ಟೆ ವೂನಾ

ಯಜುರ್ವೇದವು ಮುಖ್ಯವಾಗಿ ವೈದಿಕ ಆಚಾರಗಳನ್ನು ಒಳಗೊಂಡಿದೆ ವೈದಿಕ ಕ್ರಿಯೆಗಳ ಬಗ್ಗೆ ಅದು ಅನೇಕ ವಿವರಗಳನ್ನು ನೀಡುತ್ತದೆ ಹಾಗಾಗಿ ಆಧುನಿಕ ಸಮಾಜದಲ್ಲಿ ಈ ಪ್ರಕ್ರಿಯೆಗಳ - ಆಚಾರಗಳ – ಸಾಪೇಕ್ಷತೆಯನ್ನು ಕಂಡುಕೊಳ್ಳುವುದು ಸೂಕ್ತವಾಗುತ್ತದೆ ಯಜುರ್ವೇದದಲ್ಲಿ ವಿವರಣೆ ಪಡೆದಿರುವ ವೈದಿಕಪ್ರಕ್ರಿಯೆಗಳನ್ನು ಶ್ರೌತ ಪ್ರಕ್ರಿಯೆಗಳು ಎನ್ನುತ್ತಾರೆ ಉತ್ತರಭಾರತದಲ್ಲಿ ಯಜುರ್ವೇದೀಯ ಪ್ರಕ್ರಿಯೆಗಳು ಹಿಂದೆ ಬಿದ್ದಿವೆಯೆಂಬುದೂ, ದಕ್ಷಿಣದಲ್ಲೂ ಅಲ್ಲಿಲ್ಲಿ ಆಗಾಗ್ಗೆ ಮಾತ್ರ ಆಚರಣೆಯಲ್ಲಿರುವುದೆಂಬುದೂ, ಆಸಕ್ತಿದಾಯಕ ವಿಷಯವಾಗಿದೆ ಯಜುರ್ವೇದ ಕಾಲದಲ್ಲಿದ್ದ ಪ್ರಕ್ರಿಯೆಗಳಿಗಿಂತ ಬಹುಭಿನ್ನವಾಗಿ ಇಂದಿನ ಸಮಾಜ ಬೆಳೆದು ಬಂದಿದೆ ಅಧ್ಯಯನದ ದೃಷ್ಟಿ ಕೋನದಿಂದ ಮಾತ್ರ ಈವು ಸಾಪೇಕ್ಷವೇ ಆಗಿವೆ ವೈದಿಕ ಸಂಸ್ಕೃತಿ, ಧಾರ್ಮಿಕ ಭಾವಗಳನ್ನು, ಒಟ್ಟಾರೆ ವೇದಕಾಲೀನ ಜನರ ಜ್ಞಾನ ಪರಿಧಿಗಳನ್ನು ತಿಳಿಯಲು ಇವು ಸೂಕ್ತ ಆಧಾರಗಳಾಗಿವೆ ಹಾಗಾಗಿ ಆಧುನಿಕ ಕಾಲದಲ್ಲಿ ಯಜುರ್ವೈದಿಕ ಪ್ರಕ್ರಿಯೆಗಳ ಆಚರಣೆಯ ಪರಂಪರೆಯನ್ನು ಮುಂದುವರಿಸಲು ಪ್ರಯತ್ನಿಸಬೇಕಿದೆ

ಕಾಲೇಜು ವಿಶ್ವವಿದ್ಯಾಲಯಗಳ ಸಂಸ್ಕೃತ ವಿಭಾಗಗಳಲ್ಲಿ ಸಂಸ್ಕೃತ ಕವನ ಸ್ಪರ್ಧೆಗಳನ್ನೂ ಕಾವ್ಯವಾಚನ ಸ್ಪರ್ಧೆಗಳನ್ನು ಏರ್ಪಡಿಸುವರಲ್ಲವೇ! ಹಾಗೆಯೇ ಅಥವಾ ಪ್ರತ್ಯೇಕವಾಗಿ ವೇದ ಪಠನ ಸ್ಪರ್ಧೆಗಳನ್ನೂ ಏರ್ಪಡಿಸಬೇಕು ಈ ಸ್ಪರ್ಧೆಗಳಿಗೆ ಸಿದ್ಧರಾಗಲು ವೇದ ಪಠನದ ಧ್ವನಿಸುರುಳಿಗಳು ಬಹಳ ನೆರವೀಯಬಲ್ಲವು ಪ್ರತಿಯೊಂದು ಸಾರ್ವಜನಿಕ ಸಮಾರಂಭವೂ ವೇದ ಪಠನದ ಮಂಗಲಾಚರಣದಿಂದ ಆರಂಭ ಆಗಬೇಕು ದೇವಾಲಯಗಳಲ್ಲಿ ರಾಮಾಯಣ, ಹನುಮಂತ ಸ್ತುತಿ ಹಲವು ಭಜನೆಗಳು ಮೊದಲಾದವುಗಳನ್ನು ಪ್ರಸಾರ ಮಾಡಲಾಗುತ್ತದೆ ದೇವಾಲಯಗಳಲ್ಲೂ ಮತ್ತಿತರ ಧಾರ್ಮಿಕ ಸ್ಥಳಗಳಲ್ಲೂ ವೇದ ಪಠನದ ಧ್ವನಿ ಸುರುಳಿಗಳನ್ನೂ ಪ್ರಸಾರ ಮಾಡಬೇಕು ವಿವಿಧ ಶಾಖೆಗಳಿಗೆ ಸೇರಿದ ಪ್ರಸಿದ್ಧ ವೇದ ಪಾರಿಗಳ ವೇದಪಠನದ ಧ್ವನಿಸುರುಳಿಗಳನ್ನು, ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿಯ ರಾಷ್ಟ್ರೀಯ ಸಂಸ್ಕೃತ ವಿಶ್ವವಿದ್ಯಾಲಯ, ದೆಹಲಿಯ ರಾಷ್ಟ್ರೀಯ ವೇದವಿದ್ಯಾ ಪ್ರತಿಷ್ಠಾನದಂತಹ ಹಲವು ಸಂಸ್ಥೆಗಳು ತಯಾರಿಸುತ್ತಿವೆಯೆಂಬುದು ಶ್ಲಾಘನೀಯ ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಪ್ರಯತ್ನಗಳು ನಡೆಯಬೇಕಿವೆ ಈ ಕೇಂದ್ರಗಳು ಯಾವ ವ್ಯಕ್ತಿ, ಸಂಸ್ಥೆಗೂ, ವೇದ ಪಠನದ ಧ್ವನಿಸುರುಳಿಗಳನ್ನು ನೀಡುವ ವಿತರಣ ಕೇಂದ್ರವಾಗಬೇಕು

ನಗಣ್ಯವಾದ ಬದಲಾವಣೆಗಳೊಂದಿಗೆ ತಲೆಮಾರಿನಿಂದ ತಲೆಮಾರಿಗೆ ಸಾಗಿಬಂದ ವಿವಿಧ ಅನುಷ್ಠಾನಗಳಿಂದ ಕೂಡಿದ ಯಾಜ್ಞಿಕ ಸಂಪ್ರದಾಯಗಳ ಸುತ್ತಲೂ ವೈದಿಕ ಧರ್ಮದ ಸಾರವು ಹರಡಿದೆ ಈಗ ಪರಿಸ್ಥಿತಿಗಳು ಬದಲಾಗಿವೆ ಪಾಶ್ಚಾತ್ಯ ನಾಗರಿಕತೆಯ ಪ್ರಭಾವದಲ್ಲಿ ಜನ ಪ್ರಾಚೀನ ಆಚಾರ ವಿಚಾರಗಳು ಅತಿ ಅವೈಜ್ಞಾನಿಕ, ಆದ್ದರಿಂದಲೇ ಅನಗತ್ಯ ಎನ್ನುತ್ತ ಬೇಗನೆ ದೂರ ಸರಿಸುತ್ತಿದ್ದಾರೆ ಔಪಾಸನಾಗ್ನಿಯನ್ನು ಕಾಯ್ದಿಟ್ಟುಕೊಂಡು, ಎಲ್ಲ ಅಥವಾ ಕೆಲವಾದರೂ ಪಾಕಸಂಸ್ಥಾಗಳನ್ನು ನಡೆಸುವವರು ಇಂದು ಪ್ರಾಯಶಃ ಒಬ್ಬರೂ ಇಲ್ಲ ನಿತ್ಯದ ಅಗ್ನಿಹೋತ್ರವನ್ನೂ, ಏಳು ಹವಿರ್ಸಂಸ್ಥಾಗಳನ್ನು ನಡೆಸುವ ಆಹಿತಾಗ್ನಿಯನ್ನು ನೋಡಿಕೊಳ್ಳುವವರೂ ಅಷ್ಟೆ ಈಚೆಗೆ ದೆಹಲಿಯ ವೇದ ವಿದ್ಯಾಪ್ರತಿಷ್ಠಾನ ನಡೆಸಿದ ಗಣತಿಯಂತೆ ದೇಶದಲ್ಲಿ ಸುಮಾರು ನೂರುಮಂದಿ ಅಗ್ನಿಹೋತ್ರಿಗಳು ಮಾತ್ರ` ಉಳಿದಿದ್ದಾರೆ ಹೀಗಾಗಿ ಅಗ್ನಿಹೋತ್ರಗಳು ಪ್ರತಿನಿಧಿಸುವ ಪ್ರಾಚೀನ ಭಾರತೀಯ ಪರಂಪರೆಯನ್ನು ಭೂಮಿಯ ಮೇಲೆ ಕಾಣದೆ ಹೋಗುವುದಕ್ಕಿಂತ ಮೊದಲೇ ರಕ್ಷಿಸುವ ತುರ್ತು ಅಗತ್ಯವಿದೆ ಅಗ್ನಿ ಹೋತ್ರಗಳ ಅಭಾವದಿಂದಾಗಿ ಶ್ರೌತ ಗ್ರಂಥಗಳಲ್ಲಿ ಹೇಳಲಾಗಿರುವ ಆಚಾರಗಳನ್ನು ನಡೆಸಿಕೊಡುವ ಪುರೋಹಿತರೂ ಕಡಮೆಯಾಗಿದ್ದಾರೆ ಕುಂಭಕೋಣದಲ್ಲಿ ಶ್ರೌತ ಆಚಾರಗಳಲ್ಲಿ ಶಿಕ್ಷಣ ನೀಡಲೆಂದು ಶ್ರೌತ ಕಾಲೇಜೊಂದರ ಆರಂಭವಾಯಿತೆಂದು ಇಲ್ಲಿಯೇ ತಿಳಿಸಬಹುದಾದರೂ, ಈ ಕಾಲೇಜಿನ ಬಗ್ಗೆ ಹೆಚ್ಚಿಗೆ ಏನೂ ತಿಳಿದು ಬಂದಿಲ್ಲ ಇನ್ನೂ ಒಂದು ಕಾಲೇಜನ್ನು ಕೃಷ್ಣಾ ಜಿಲ್ಲೆಯ ಮಡಿವಾಡು ಗ್ರಾಮದಿಂದ ಮೂರು ಕಿ ಮೀ ದೂರದಲ್ಲಿ ಕೃಷ್ಣಾನದೀದಂಡೆಯಲ್ಲಿ ಭರದ್ವಾಜ ಬೆಟ್ಟದಲ್ಲಿ ಸ್ಥಾಪಿಸಲು ಮಲ್ಲಾದಿ ಪ್ರಾಜೆಕ್ಟ್ ಮುಂದೆ ಬಂದಿದೆ

ಶ್ರೌತ ಆಚಾರಗಳ ಪರಿರಕ್ಷಣೆಗೆ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಲು ಶ್ರೌತ ಕಾಲೇಜುಗಳು, ವೇದ ವೇದಾಂತ ಮಹಾ ವಿದ್ಯಾಲಯಗಳ ಸ್ಥಾಪನೆಯೊಂದಿಗೇ, ಶ್ರೌತ ಯಜ್ಞಯಾಗಾದಿಗಳನ್ನು ಸಮೂನೆಗಾಗಿ ಆಚರಿಸಿ ಅವುಗಳನ್ನು ಚಲನಚಿತ್ರಗಳಾಗಿ ದಾಖಲು ಮಾಡಿಕೊಂಡು ರಕ್ಷಿಸಲು ಸೂಚಿಸಬಹುದು ಪ್ರೊ|| ಸ್ಟಾಲ್ ಹಾಗೂ ಆಸ್ಕೋ ಪೀರಪೋಲ ಅವರುಗಳ ನಿರ್ದೇಶನದಲ್ಲಿ ಆಗ್ನಿಕ ಯಜ್ಞವನ್ನು ಆಚರಿಸಿ ಸಂಪೂರ್ಣವಾಗಿ ಚಿತ್ರೀಕರಿಸಲಾಗಿದೆ ಎಂಬುದನ್ನಿಲ್ಲಿ ಹೇಳಬಹುದು ವಾಜಪೇಯದ ಬಗ್ಗೆಯೂ ಇಂತಹದೇ ಚಲನ ಚಿತ್ರವನ್ನು ತೆಗೆಯಲಾಗಿದೆ ಇಂತಹ ಎಲ್ಲ ಮುಖ್ಯ ಯಜ್ಞಗಳ ಚಲನ ಚಿತ್ರಗಳನ್ನು ತಯಾರಿಸಿ, ಯಾರು ಈ ಯಜ್ಞಗಳನ್ನು ದರ್ಶಿಸುವರೋ ಅವರಿಗೆ ಅವರ ಹಿರಿಯರ ಹಿಂದಿನವರ ಆಶೀರ್ವಾದ ದೊರೆಯುವುದೆಂಬ ಫಲಶ್ರುತಿಯೊಡನೆ ಸಾರ್ವಜನಿಕರಿಗೆ ತೋರಿಸಬೇಕು ಕಾಲೇಜುಗಳಲ್ಲೂ, ಸಂಸ್ಕೃತ ವಿಭಾಗಗಳಲ್ಲೂ ಈ ಚಿತ್ರಗಳನ್ನು ಇತರ ದೇಶಭಕ್ತರ ಚಿತ್ರಗಳನ್ನು ತೋರಿಸುವಂತೆಯೇ ತೋರಿಸಬೇಕು ಇದರಿಂದಾಗಿ ಸಹಜವಾಗಿಯೇ ವಿದ್ಯಾರ್ಥಿಗಳಲ್ಲಿ ಈ ಬಗ್ಗೆ ಆಸಕ್ತಿಯುಂಟಾಗುತ್ತದೆ ಇವುಗಳನ್ನು ನೋಡುವುದರಿಂದ ಯಜ್ಞಯಾಗಾದಿಗಳನ್ನು ನಡೆಸುವ ವಿಧಾನಗಳನ್ನು ಅವರು ತಿಳಿಯುತ್ತಾರೆ ವೈದಿಕ ಯಜ್ಞಗಳ ಚಲನ ಚಿತ್ರಗಳನ್ನು ತೆಗೆಯುವಲ್ಲಿ ಬೆಳ್ಳಿತೆರೆಯ ನಟನಟಿಯರನ್ನೂ ಬಳಸಬಹುದು ಯುಧಿಷ್ಠಿರನ ರಾಜಸೂಯ, ರಾಮನ ಅಶ್ವಮೇಧ ಮೊದಲಾದವನ್ನು ಧಾರಾವಾಹಿಗಳನ್ನಾಗಿಸಬಹುದು ರಾಮಾಯಣ ಮಹಾಭಾರತ, ಚಾಣಕ್ಯಗಳಂತೆಯೇ ಧಾರ್ಮಿಕ ಹಿನ್ನೆಲೆ ಹೊಂದಿದ ಭಾರತೀಯರಲ್ಲಿ ಈ ಧಾರಾವಾಹಿಗಳೂ ಜನಪ್ರಿಯವಾಗುವುದರಲ್ಲಿ ಸಂದೇಹವಿಲ್ಲ

ವೈದಿಕ ಯಜ್ಞಯಾಗಾದಿಗಳ **ಆಚರಣೆಯ** ಅಭಾವದಿಂದಾಗಿ ಯಜ್ಞೋಪಕರಣಗಳ ಬಗ್ಗೆ ತಿಳುವಳಿಕೆಯೂ ಕಷ್ಟಕರವಾಗಿದೆ, ಯಜ್ಞೋಪಕರಣಗಳನ್ನು ಸಂಗ್ರಹಿಸಿ ಪ್ರದರ್ಶನಕ್ಕೆ ಇಟ್ಟರೆ ಒಳ್ಳೆಯದು ವಿದ್ಯಾರ್ಥಿಗಳಿಗೆ ಇದರ ಸೂಕ್ತ ಪರಿಚಯವಾಗಲು, ವೈದಿಕ ವಿದ್ವಾಂಸರ ಮೇಲ್ವಿಚಾರಣೆಯಲ್ಲಿ ಬ್ರಾಹ್ಮಣಗಳು ಹಾಗೂ ಶ್ರೌತ ಸೂತ್ರಗಳಿಗನುಸಾರವಾಗಿ ಕೆಲಸ ಮಾಡುವ ಬಡಗಿ ಕುಂಬಾರರನ್ನು ಇವುಗಳ ತಯಾರಿಕೆಗೆ ಬಳಸಬೇಕು ಪುರಾವಸ್ತು ಶಾಸ್ತ್ರ ವಿಭಾಗವು ಉತ್ಖನನಗಳಲ್ಲಿ ದೊರೆತ ವಸ್ತುಗಳನ್ನು ರಕ್ಷಿಸುವಂತೆಯೇ ಇವುಗಳನ್ನೂ ಭವಿಷ್ಯತ್ಕಾಲಕ್ಕಾಗಿ ರಕ್ಷಿಸಿಡಬೇಕು ಪೂನಾದ ವೈದಿಕ ಸಂಶೋಧನಾ ಮಂಡಲ ಇಂತಹ ಯಜ್ಞೋಪಕರಣಗಳ ಮುಖ್ಯ ಸಂಗ್ರಹವನ್ನು ಹೊಂದಿದ್ದು ಆ ಬಗ್ಗೆ ಒಂದು ಪುಸ್ತಕವನ್ನೂ ಪ್ರಕಟಿಸಿದೆ ಎಂಬುದು ಇಲ್ಲಿ ನೆನೆಯಬಹುದು

## ವೇದಾಧ್ಯಯನದ ಪರಿಸ್ಥಿತಿ

ವೈದಿಕ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಸಂಸ್ಕೃತಾಧ್ಯಯನಕ್ಕೆ ಅನ್ವಯವಾಗುವ ಎಲ್ಲ ಅಂಶಗಳೂ ವೇದಾಧ್ಯಯನಕ್ಕೂ ಅನ್ವಯವಾಗುತ್ತವೆ ಇಂದು ಸಂಸ್ಕೃತದ ಪ್ರೌಢವ್ಯಾಸಂಗ ಬಹು ಕೆಳಮಟ್ಟದಲ್ಲಿದೆ ತ್ರಿಭಾಷಾ ಸೂತ್ರದನ್ವಯ ಇದಕ್ಕೆ ಸ್ಥಾನವಿಲ್ಲ ಇದರಿಂದಾಗಿ ಉನ್ನತ ಮಟ್ಟದ ಸಂಸ್ಕೃತ ವಿದ್ಯಾಭ್ಯಾಸ ಪೆಟ್ಟು ತಿಂದಿದೆ ಫಲವಾಗಿ ಸ್ನಾತಕ ಹಾಗೂ ಸ್ನಾತಕೋತ್ತರ ಮಟ್ಟದಲ್ಲಿ ಕೆಲವೇ ಮಂದಿ ವಿದ್ಯಾರ್ಥಿಗಳು ಸಂಸ್ಕೃತವನ್ನು ಆಯ್ದುಕೊಳ್ಳುತ್ತಾರೆ ಈ ಕೆಲವೇ ವಿದ್ಯಾರ್ಥಿಗಳಲ್ಲಿ ಎಷ್ಟು ಮಂದಿ ವೇದಗಳನ್ನು ಅಧ್ಯಯನಕ್ಕೆ ಆರಿಸಿಕೊಳ್ಳುತ್ತಾರೆ ಎಂಬುದನ್ನು ಯಾರಾದರೂ ಊಹಿಸಬಹುದು ಬಹುತೇಕ ವಿಶ್ವವಿದ್ಯಾಲಯಗಳಲ್ಲಿ ಸ್ನಾತಕಸ್ಥಾಯಿಯಲ್ಲಿ ವೇದ ಶಿಕ್ಷಣ ಇಲ್ಲವೇ ಇಲ್ಲ ಸ್ನಾತಕೋತ್ತರ ಶಿಕ್ಷಣದಲ್ಲಿ ಬಹುತೇಕ ಸಂಸ್ಕೃತ ವಿಭಾಗಗಳಲ್ಲಿ ವೇದಗಳ ಬಗ್ಗೆ ಒಂದು ಸಾಮಾನ್ಯ ವಿಷಯ ಪುಂಟೇ ಹೊರತು ವೇದದ ವಿಶೇಷಾಧ್ಯಯನವಿಲ್ಲ ಸಾಮಾನ್ಯ ವಿಷಯವನ್ನೂ ವೇದ ತಜ್ಞರಲ್ಲದವರು ಬೋಧಿಸುತ್ತಾರೆ ಇದರಿಂದಾಗಿ ವೈದಿಕ ಅಧ್ಯಯನ ಪರಿಶೋಧನೆಗಳ ಮಟ್ಟ ಇಳಿದಿದೆ ಈ ಬಗ್ಗೆ ತೀವ್ರ ಆಲೋಚನೆ ಅಗತ್ಯವಿದೆ ಮೇಲ್ಮಟ್ಟಗಳಲ್ಲಿ ವೇದ ಶಿಕ್ಷಣ ನೀಡುವ ಶಿಕ್ಷಕ ವೇದಗಳ ವಿಷಯದ ತಜ್ಞನಾಗಿರಬೇಕು ಈಗ ಪಾಶ್ಚಿಮಾತ್ಯ ವಿದ್ವತ್ತೆಯಿಂದಾಗಿ ವೈದಿಕ ಅಧ್ಯಯನದ ಪರಿಧಿ ವಿಸ್ತರಿಸಿದೆ ಕಾಲದಿಂದಲೂ ಭಾರತೀಯ ಪರಂಪರೆ

ವೇದಗಳನ್ನು ಧಾರ್ಮಿಕ ಗ್ರಂಥಗಳೆಂದೇ ಬಗೆಯುತ್ತ ಬಂದಿದೆಯಾದರೂ, ಸಾಹಿತ್ಯದ ಒಂದು ಅಂಗವಾಗಿ, ಕಾವ್ಯ, ಸಮಾಜಶಾಸ್ತ್ರಗಳು, ತತ್ವ ಚಿಂತನೆಗಳ ದೃಷ್ಟಿಯಿಂದಲೂ ಅವುಗಳ ಅಧ್ಯಯನ ನಡೆಯಬೇಕು ಆಯಾ ಸಾಮಾಜಿಕ ಶಾಸ್ತ್ರಗಳ ಅಧ್ಯಯನ ವಿಷಯಗಳಲ್ಲಿ ಈ ಯೋಚನೆಗಳನ್ನೂ ಸೇರಿಸಬೇಕು ಪಂಡಿತ ಮಧುಸೂದನ ಓಝಾ, ಪಂಡಿತ ಮೋತಿಲಾಲ ಶಾಸ್ತ್ರಿ ಮತ್ತಿತರರು ಸಮಕಾಲೀನ ಭಾರತೀಯ ಪಾಂಡಿತ್ಯದ ಗಮನವನ್ನು ವೇದ ವಿಜ್ಞಾನದತ್ತ ತಿರುಗಿಸಿದ್ದಾರೆ ಎಂದಿಲ್ಲಿ ಹೇಳಬಹುದು ಇದೇ ಮಾರ್ಗದಲ್ಲಿ ರಾಷ್ಟ್ರೀಯ ವೇದ ವಿದ್ಯಾಪ್ರತಿಷ್ಠಾನವೂ ಯೋಚಿಸುತ್ತಿದೆ ಈ ದಾರಿಯಲ್ಲಿ ಹೆಚ್ಚು ಪ್ರಯತ್ನಗಳಾಗಬೇಕಿವೆ ಭೂರ್ಜಪತ್ರ, ತಾಳಪತ್ರ, ಕೋರಿಕಾಗದಗಳ ಮೇಲೆ ಬರೆಯಲಾಗಿರುವ ವೇದಗ್ರಂಥಗಳು ಬಹುಸಂಖ್ಯೆಯಲ್ಲಿ ಇನ್ನೂ ಇವೆ ಅವುಗಳನ್ನೆಲ್ಲಾ ಸೂಕ್ಷ್ಮ ಚಿತ್ರಗಳನ್ನಾಗಿ ಅಥವಾ ಸೂಕ್ಷ್ಮಪಟಗಳಾಗಿ ರಕ್ಷಿಸಬೇಕಾದ ತುರ್ತು ಹೆಚ್ಚಿದೆ ದೆಹಲಿಯ ಇಂದಿರಾಗಾಂಧಿ ಕಲಾಕೇಂದ್ರವು ಡಾ|| ಕಪಿಲಾವಾತ್ಸ್ಯಾಯನ ಅವರ ನೇತೃತ್ವದಲ್ಲಿ ಈ ದಿಸೆಯಲ್ಲಿ ಶ್ಲಾಘನೀಯವಾಗಿ ದುಡಿಯುತ್ತಿದೆ ಈ ಪ್ರಯತ್ನ ಇನ್ನೂ ತೀವ್ರವಾಗಬೇಕು

## ವೈದಿಕ ಗ್ರಂಥ ಪ್ರಕಟನೆ

ಈ ‘ಪ್ಪತ್ತನೇ ದಶಕದಲ್ಲಿ ಮೂಲ ವೈದಿಕ ಗ್ರಂಥಗಳ ಪ್ರಕಟನೆಯಲ್ಲಿ ನಾವು ಹೆಚ್ಚಿನ ಕಷ್ಟಗಳಿಗೆ ತುತ್ತಾಗಿದ್ದೇವೆ ಬಹು ಕಷ್ಟದಿಂದ ಒಬ್ಬ ವೈದಿಕ ವಿದ್ವಾಂಸ ಒಂದು ಕೃತಿಯನ್ನು ಸಂಪಾದಿಸಿದಾಗಲೂ ಅದನ್ನು ಮುದ್ರಿಸಿ ಪ್ರಕಟಪಡಿಸುವುದು ಕಠಿಣವಾಗಿದೆ ವಿದ್ವಾಂಸರಿಗೆ ತಕ್ಕ ಧನದ ಅಭಾವ ಕಷ್ಟಪಟ್ಟು ವೆಚ್ಚವನ್ನು ತೂಗಿಸಲು ಸಿದ್ಧನಾದರೂ ವೈದಿಕ ಕೃತಿಗಳ ಮುದ್ರಣಕ್ಕೆ ಬೇಕಾದ ಸಂಕೇತ, ಚಿಹ್ನೆಗಳನ್ನು ಹೊಂದಿದ ಅಚ್ಚುಕೂಟ ದೊರೆಯದು ಮುದ್ರಣದಲ್ಲಿ ಅಚ್ಚುಕೂಟಗಳ ನಿಧಾನದಿಂದಾಗಿ ಗೊತ್ತಾದ ಕಾಲಕ್ಕೆ ತಕ್ಕಂತೆ ಪುಸ್ತಕವನ್ನು ಹೊರತರಲಾಗದು ಉದಾಹರಣೆಗೆ ನಾನೇ ನನ್ನ ವಾಧೂಳ ಶ್ರೌತ ಸೂತ್ರದ ಸಂಪಾದಿತ ಕೃತಿಯನ್ನು 1987 ರಲ್ಲಿ ವಾರಣಾಸಿಯಲ್ಲಿ ಮುದ್ರಣಾಲಯಕ್ಕೆ ಕೊಟ್ಟೆ, ಕೃತಿಯ ಪದ್ಯಭಾಗವನ್ನು ಮುದ್ರಿಸಲು ನಾಲ್ಕು ವರ್ಷ ತೆಗೆದುಕೊಂಡ ಮುದ್ರಣಾಲಯ 1991 ರಲ್ಲಿ ಅದರ ಅನುಕ್ರಮಣಿಕೆಯನ್ನು ಮುದ್ರಿಸಲು ನಿರಾಕರಿಸಿದ್ದರಿಂದ ಇಂದು ಅನುಕ್ರಮಣಿಕಾ ಭಾಗ ದೆಹಲಿಯಲ್ಲಿ ಮುದ್ರಿತವಾಗುತ್ತಿದೆ ಒಂದು ಕೃತಿ ಮುದ್ರಣವಾಗಲು 5 ರಿಂದ 8 ವರ್ಷ ಬೇಕು ವೇದಗಳಲ್ಲಿ ಪ್ರಸಿದ್ಧ ವಿದ್ವಾಂಸರಾದ ಡಾ|| ಬಿ ಆರ್ ಶರ್ಮ ಅವರು ಸಾಮವೇದವನ್ನು ಮಧ್ವಾಚಾರ್ಯ, ಭರತಸ್ವಾಮಿ, ಸಾಯಣ, ಭಾಷ್ಯಗಳೊಂದಿಗೆ ಪದಪಾಠನ್ನು ಕೊಟ್ಟು ಸಂಪಾದಿಸಿದ್ದಾರೆ ಮೋತಿಲಾಲ್ ಬನಾರಸೀದಾಸ್ ಅವರಿಗೆ ಮುದ್ರಣಾಲಯ ಪ್ರತಿಯನ್ನು ಸಿದ್ಧಪಡಿಸಿಕೊಟ್ಟಿದ್ದಾರೆ ಆದರೆ ಅದು ಇನ್ನೂ ಯಾವ ಮುದ್ರಣಾಲಯವನ್ನೂ ಸೇರಿಲ್ಲ, ಕಾರಣ ಯಾವುದೇ ಮುದ್ರಣಾಲಯವೂ ಅದನ್ನು ಮುದ್ರಿಸಲು ಬೇಕಾದ ಅಚ್ಚು ಮೊಳೆಚಿನ್ಹೆಗಳನ್ನು ಹೊಂದಿಲ್ಲ ಪ್ರಕಟನಕಾರರು ಗೌರವಧನ ಕೊಡದೆಯೇ ಬಹುಮಂದಿ ವೈದಿಕ ವಿದ್ವಾಂಸರನ್ನು ಶೋಷಿಸುತ್ತಿದ್ದಾರೆ ಹೀಗೆ ಪ್ರಕಟವಾದ ಪುಸ್ತಕಗಳೂ ವೈಯಕ್ತಿಕ ಅಧ್ಯಯನಕ್ಕೆಂದು ಯಾರೂ ಕೊಂಡುಕೊಳ್ಳಲಾರದಷ್ಟು ದುಬಾರಿ ಬೆಲೆಯವು ಈ ಪುಸ್ತಕಗಳನ್ನು ಈಗ ಶಿಕ್ಷಣ ಪ್ರಕಟನೆಗಳಾಗಿ ಅಲ್ಲದೆ ವ್ಯಾಪಾರೋದ್ದೇಶದಿಂದ ಪ್ರಕಟನಲಾಗುತ್ತಿದೆ ಕೇಂದ್ರ ರಾಜ್ಯ ಸರ್ಕಾರಗಳ 100 ಶತಾಂಶ ನೆರವಿನಿಂದ ವೈದಿಕ ಪರಿಶೋಧನಾಕೇಂದ್ರಗಳು ಪ್ರಕಟಿಸುವ ಪುಸ್ತಕಗಳ ಬೆಲೆ ಕಡಮೆಯಾಗಿರಬೇಕೆಂದು ಸೂಚಿಸುತ್ತೇನೆ ಗೋರಖಪುರದ ಗೀತಾಪ್ರೆಸ್ ಉಪನಿಷತ್ತು, ತತ್ವ ಶಾಸ್ತ್ರ, ಧರ್ಮ ಗ್ರಂಥಗಳನ್ನು ಸುಲಭ ದರದಲ್ಲಿ ಪ್ರಕಟಿಸಿ ಮಹತ್ವದ ಸೇವೆ ಸಲ್ಲಿಸುತ್ತಿದೆ ವೈದಿಕ ಕೃತಿಗಳನ್ನು ಸುಲಭಬೆಲೆಯಲ್ಲಿ ನೀಡುವಲ್ಲಿ ಪರಡಿಯ ವೈದಿಕ ಸ್ವಾಧ್ಯಾಯ ಮಂಡಳವೂ ಒಳ್ಳೆಯ ಕೆಲಸ ಮಾಡಿದೆ ತಿ ತಿ ದೇ ಗಳಂತಹ ಸಂಸ್ಥೆಗಳು ಸರ್ವರಿಗೂ ವೈದಿಕ ಸಾಹಿತ್ಯ ದೊರಕಿಸಿಕೊಡಲು ಹೆಚ್ಚು ಹೆಚ್ಚು ಕೆಲಸ ಮಾಡಬೇಕಿದೆ ಈ ಕೆಲಸದಲ್ಲಿ ನೆರವುನೀಡಲು ಬಹುಮಂದಿ ಕೈಗಾರಿಕೋದ್ಯಮಿಗಳು ದಾನಿಗಳು ಮುಂದೆ ಬರುವರೆಂದು ನಾನು ಭಾವಿಸುತ್ತೇನೆ

ಕೊನೆಯಲ್ಲಿ ವೇದಗಳನ್ನು ಹೊಗಳುತ್ತಲೇ ಅವುಗಳ ಅಧ್ಯಯನವನ್ನು ನಿರ್ಲಕ್ಷಿಸುವ ದ್ವಂದ್ವ ಭಾವದಿಂದ ಮೇಲೇರಿ ನಿಲ್ಲಬೇಕೆಂದು ಅವಧಾರಿಸಿ ಹೇಳುತ್ತೇನೆ



# ಆಧುನಿಕ ಸಮಾಜದಲ್ಲಿ ಅಥರ್ವವೇದ

**ಡಾ|| ಆರ್ ಎನ್ ಅರಳೀಕಟ್ಟಿ ತಿರುಪತಿ**

ಒಂದು ದೇಶದ ಜೀವಾಳ ಅದರ ಸಂಸ್ಕೃತಿಯಾಗಿರುತ್ತದೆ ಭಾರತೀಯ ಸಂಸ್ಕೃತಿ ವೇದ ಮತ್ತು ಸಂಸ್ಕೃತ ಸಾಹಿತ್ಯಮೂಲವಾದ್ದು ವೇದಗಳು ಜ್ಞಾನದ ಎಲ್ಲ ಶಾಖೆಗಳ ಸಮಗ್ರ ವಿಶ್ವಕೋಶ ಹಾಗೂ ನಮ್ಮ ಋಷಿ ಮುನಿಗಳ ಬುದ್ಧಿಯ ಕೆನೆಯಾಗಿದೆ

ಮೊದಲು ತ್ರಯೀ ವೇದದಲ್ಲಿ ಸೇರದಿದ್ದ ಅಥರ್ವವೇದವನ್ನು ನಾಲ್ಕನೆಯ ವೇದವೆನ್ನುವರು ಪಿಪ್ಪಲಾದ ಶೌನಕ ಶಾಖೆಗಳಲ್ಲಿ ಇದು ಉಪಲಬ್ಧವಿದ್ದು 958 ಸೂತ್ರಗಳು ಹಾಗೂ 5977 ಋಚಾಗಳನ್ನೂ ಹೊಂದಿದೆ (ಸಾತವೇಲಕರರ ಸಂಪಾದಿತ ಗ್ರಂಥದಂತೆ) ಈ ಸಂಹಿತೆ 20 ವಿಭಾಗಗಳಾಗಿದ್ದು ಏಳು ಹೆಸರುಗಳನ್ನು ಹೊಂದಿದೆ – ಅವುಗಳೆಂದರೆ ಅಥರ್ವವೇದ, ಬ್ರಹ್ಮವೇದ, ಅಥರ್ವಾಂಗೀರಸಾಂ, ಅಂಗೀರೋವೇದ, ಭೃಗ್ವಂಗೀರಸ ವೇದ, ಕ್ಷತ್ರವೇದ, ಭೈಷಜ್ಯವೇದ – ಇವೆಲ್ಲ ಹೆಸರುಗಳೂ ಸಾರ್ಥಕನಾಮಗಳೇ ಆಗಿವೆ

ಅಥರ್ವವೇದ ಪ್ರೋಕ್ತವಾದ ಬಹಳಷ್ಟು ಕರ್ಮಗಳು – ಕ್ರಿಯೆಗಳು – ಯಜ್ಞಯಾಗಾದಿ ಧಾರ್ಮಿಕ ಕ್ರಿಯೆಗಳಷ್ಟೇ ಅಲ್ಲದೆ ಐಹಿಕ ಫಲಪ್ರಾಪ್ತಿ ಸಾಧಕಗಳೂ, ಮಾನವಕುಲಕ್ಕೆ ಪರಮೋಪಕಾರ ಮಾಡುವಂತವೂ ಆಗಿವೆ ಶತ್ರು ನಾಶವನ್ನು ಕುರಿತು ಬಹು ರೀತಿಯಲ್ಲಿ ವರ್ಣಿಸುತ್ತ, ನಮ್ಮ ಜೀವನದ ಒಳಿತು ಕೆಡುಕುಗಳ ಅನೇಕ ವಿಷಯಗಳನ್ನು ಒಳಗೊಳ್ಳುತ್ತವೆ ರೋಗ ನಿರೋಧವನ್ನೂ, ಕ್ರೂರಮೃಗ ಬಾಧೆಯನ್ನೂ ಶತ್ರುಗಳೂ, ರಾಕ್ಷಸರು, ಪುರೋಹಿತರ ಶೋಷಕರು, ಸರ್ಪದೋಷ, ಜ್ವರ ಮೊದಲಾದವುಗಳ ವಿರುದ್ಧ ಶತ್ರು ನಿವಾರಣೆಯ ಋಚಾಗಳು ಹೇಳಲಾಗಿದೆ ಸಂಸಾರ, ಗ್ರಾಮಜೀವನಗಳಲ್ಲಿ ಸೌಹಾರ್ದವನ್ನುಂಟಾಗಿಸಲು ಸೂಕ್ತ ನಡತೆಯ ಬಗ್ಗೆಯೂ ತಿಳಿಸುತ್ತವೆ ಬುದ್ಧಿಯ ತೀವ್ರತೆಗೆ, ಶತ್ರುಗಳೊಡನೆ ಸಂಬಂಧ ಬೆಳೆಯಲು, ಯುದ್ಧ ತಂತ್ರಗಳಿಗೆ, ಆರೋಗ್ಯಕ್ಕೆ, ದೀರ್ಘ ಆಯಸ್ಸಿಗೆ, ಅತಿಥಿ ಸತ್ಕಾರಕ್ಕೆ ರಾಷ್ಟ್ರ ಜೀವನದಲ್ಲಿ ಏಕತೆಗೆ ತಕ್ಕ ಸೂಕ್ತಗಳನ್ನು ಹೊಂದಿದೆ

ಈ ವೇದದ ವಿಶಿಷ್ಟ ಗುಣವೆಂದರೆ ಇಲ್ಲಿನ ತಲಸ್ಪರ್ಶಿಯೂ, ಒಳದೃಷ್ಟಿಯದೂ ಆದ ತಾತ್ವಿಕ ಜಿಜ್ಞಾಸೆ ಮ್ಯಾಕ್‌ಡೋನೆಲ್ ಅವರ ಅಭಿಪ್ರಾಯದಲ್ಲಿ ನಾಗರಿಕತೆಯ ಇತಿಹಾಸಕ್ಕೆ ಇದರಿಂದ ಮಹತ್ವದ ಕೊಡುಗೆ ಸಂದಿದೆ ಗೃಹ್ಯಸೂತ್ರದಲ್ಲಿ ವಿವರಣೆ ಹೊಂದಿದ ಒಂದೂ ವಿವಾಹ ಮತ್ತಿತರ ಗೃಹ ಅನುಷ್ಠಾನಗಳ ಬಗೆಗಿನ ಕಲ್ಪನೆಗಳಿಗೆ ಈ ವೇದವೇ ಆಧಾರವಾಗಿದೆ ಧರ್ಮ (ನ್ಯಾಯಶಾಸ್ತ್ರ) ಆಯುರ್ವೇದ, ಖಗೋಳವಿಜ್ಞಾನ, ಜ್ಯೋತಿಷ್ಯಶಾಸ್ತ್ರ, ಪಶುವೈದ್ಯಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರಗಳ ಕ್ಷೇತ್ರದಲ್ಲಿ ಈ ವೇದ ಮಹತ್ವದ ವಂತಿಗೆ ನೀಡಿದೆ ಸೂಕ್ತ ಮೂಲಿಕೆಗಳ ವಿವರಣೆಗಳನ್ನು ನೀಡಿ, ಸರಿಯಾದ ನಿರ್ದೇಶಗಳನ್ನು ನೀಡುವ ಭಾರತೀಯ ವೈದ್ಯಶಾಸ್ತ್ರದ ಪ್ರಾಚೀನತಮ ಸಾಹಿತ್ಯದ ಆಧಾರವಾಗಿದೆ

* * * * *

# ಶಾಸ್ತ್ರಾಧ್ಯಯನದ ಅಗತ್ಯ

—ಪ್ರೊ|| ಕೆ ಟಿ ಪಾಂಡುರಂಗಿ

ಕಪಿಲಸ್ಯ ಕಣಾದಸ್ಯ
ಗೌತಮಸ್ಯ ಪತಂಜಲೇಃ
ವ್ಯಾಸಸ್ಯ ಜೈಮಿನಿಶ್ಚೇತಿ
ದರ್ಶನಾನಿ ಷಡೇವ ಹಿ

ಈ ಆರು ದರ್ಶನಗಳ ಬಗ್ಗೆ ಕಾಲಾನುಕ್ರಮದಲ್ಲಿ ಸೂತ್ರ, ಭಾಷ್ಯ, ವ್ಯಾಖ್ಯಾನ, ಅನುವ್ಯಾಖ್ಯಾನ, ವಾದಗ್ರಂಥ, ಪ್ರಕರಣಗ್ರಂಥ, ಕ್ರೋಢಪತ್ರ, ಫಕ್ಕಿಕ ಮೊದಲಾದ ಬಹುವಿಧ ಸಾಹಿತ್ಯ ಬೆಳೆದು ಬಂದಿದೆ ಪ್ರಾಚೀನ ಕಾಲದಲ್ಲಿ ಈ ಎಲ್ಲ ಸಾಹಿತ್ಯವನ್ನೂ ಗುರುಶಿಷ್ಯ ಪರಂಪರೆಯಲ್ಲಿ ಮೌಖಿಕವಾಗಿ ಸಂರಕ್ಷಿಸಲಾಗಿದ್ದಿತು ನಂತರ ಬರವಣಿಗೆಯ ಕಲೆಯು ಬೆಳೆದ ಮೇಲೆ ಇವನ್ನು ಭೂರ್ಜಪತ್ರ, ತಾಳಪತ್ರ, ಕೋರಿಕಾಗದಗಳ ಮೇಲೆ ಬರೆಯಲಾಯಿತು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಪುಸ್ತಕ ಎಂಬ ಪದ ಕಂಡುಬರುತ್ತದೆ ಗ್ರಂಥವೆಂಬ ಪದ ಮತ್ತೂ ಪ್ರಾಚೀನವಾದದ್ದು ಲಿಪಿ-ಪದ ಅದಕ್ಕಿಂತ ಹಿಂದಿನದು ಮೊದಲಿಗೆ ಬರವಣಿಗೆಯನ್ನು ಬಹುಕಡಮೆ ಉದ್ದೇಶಗಳಿಗಾಗಿ ಬಳಸಿರಬಹುದು, ನಂತರವೇ ಸಾಹಿತ್ಯ ಶಾಸ್ತ್ರಗಳಿಗಾಗಿ ಬಳಕೆ ಆಗಿರಬೇಕು ಮೊದಲಿಗೆ ಪ್ರಾಯಶಃ ಗುರು ಹಾಗೂ ಶಿಷ್ಯರುಗಳೇ ಈ ಕೃತಿಗಳನ್ನು ಬರವಣಿಗೆಗೆ ಇಳಿಸಿರಬಹುದು ನಂತರದ ಕಾಲದಲ್ಲಿ ಪುಸ್ತಕಗಳನ್ನು ಬರೆಯುವುದು ಶಿಕ್ಷಣಕ್ಕೆ ಮಾಡಿದ ಸೇವೆ ಎಂದು ಬೆಳವಣಿಗೆ ಹೊಂದಿರಬೇಕು ಈ ಪುಸ್ತಕ ಬರಹಗಾರರನ್ನು ಲಿಪಿಕಾರರು ಎಂದು ಕರೆಯಲಾಗುತ್ತಿದ್ದಿತು ಇವರು ಸುಂದರವಾಗಿ ಹಾಗೂ ಸ್ಪಷ್ಟವಾಗಿ ಬರೆಯುವಲ್ಲಿ ಬಹಳ ಎಚ್ಚರಿಕೆ ವಹಿಸುತ್ತಿದ್ದರು ಅನೇಕ ಹಸ್ತಪ್ರತಿಗಳಲ್ಲಿ ಕೆಳಗಣ ಪದ್ಯ ಕಂಡುಬರುತ್ತದೆ

ಭಗ್ನ ಪೃಷ್ಠ ಕಟಿಗ್ರೀವ
ಸ್ತಬ್ಧದೃಷ್ಟಿಃ ಅಧೋಮುಖಃ
ಕಷ್ಟೇನ ಲಿಖಿತೋ ಗ್ರಂಥಃ
ಯತ್ನೇನ ಪರಿಪಾಲ್ಯತಾಮ್

ಪುಸ್ತಕವನ್ನು ಬರೆಯುವ ಮತ್ತು ಅವುಗಳನ್ನು ವಿದ್ವಾಂಸರಿಗೆ ವಿದ್ಯಾರ್ಥಿಗಳಿಗೆ ದಾನ ನೀಡುವ ಈ ಸೇವೆ ಜೈನ ಪರಂಪರೆಯಲ್ಲಿ ಬಹು ಪ್ರವರ್ಧಮಾನವಾಯಿತು ಜೈನರು ಇದನ್ನು - ಪುಸ್ತಕದಾನವನ್ನು - ಪವಿತ್ರ ಸೇವೆ ಎಂದು ಭಾವಿಸುತ್ತಾರೆ ಲಿಪಿಕಾರರಿಂದ ಹೇಮಚಂದ್ರನ ಶಬ್ದಾನು ಶಾಸನ ಕೃತಿಯ ಒಂದು ಸಾವಿರ ಪ್ರತಿಗಳನ್ನು ಮಾಡಿಸಿ ಅವುಗಳನ್ನು ವಿದ್ವಾಂಸರಿಗೆ ಪಟ್ಟಣದ ರಾಜನು ವಿತರಿಸಿದನೆಂದು ಹೇಳಲಾಗಿದೆ ಅವನು ಒಂದು ದೊಡ್ಡ ಪುಸ್ತಕ ಭಂಡಾರವನ್ನು ಅಭಿವೃದ್ಧಿಗೊಳಿಸಿದ ಹೀಗೆ ವೇದಗಳ ಹೊರತು ಮಿಕ್ಕೆಲ್ಲ ಕೃತಿಗಳೂ ಬರವಣಿಗೆಯಲ್ಲಿ ಪ್ರಾಚೀನ ಕಾಲದಲ್ಲಿ ರೂಪುಗೊಂಡವು

ಅಗ್ರಹಾರಗಳಲ್ಲಿನ ವಿದ್ವಾಂಸರ ಮನೆಗಳಲ್ಲಿಯೇ ಈ ಶಾಸ್ತ್ರಗಳ ಬೋಧನೆ, ಅಧ್ಯಯನಗಳು ನಡೆಯುತ್ತಿದ್ದವು ದೇವಾಲಯಗಳಿಗೆ ಸೇರಿದ ಪಾಠಶಾಲೆಗಳೂ ಇದ್ದವು ಬೇರೆ ಬೇರೆ ಸಂಪ್ರದಾಯದ ಮಠಗಳಲ್ಲಿ ಆಯಾ ಸಂಪ್ರದಾಯದ ಬೋಧನೆ ಅಧ್ಯಯನಗಳು ನಡೆಯುತ್ತಿದ್ದವು ಪ್ರತಿಯೊಬ್ಬ ಪರಂಪರಾನುಗತ ವಿದ್ವಾಂಸನೂ ತನ್ನದೇ ಆದ ಹಸ್ತಪ್ರತಿಗಳ ಸಂಗ್ರಹವನ್ನು ಹೊಂದಿರುತ್ತಿದ್ದ ದೇವಾಲಯಗಳಲ್ಲೂ, ಮಠಗಳಲ್ಲೂ ಕೆಲವು ಗ್ರಂಥ ಭಂಡಾರಗಳೂ ಇದ್ದವು ನಲಂದ, ತಕ್ಷಶಿಲೆ, ಬೌದ್ಧ ವಿಹಾರಗಳಲ್ಲಿ, ಜೈನ ಬಸದಿಗಳಲ್ಲಿ, ಶಿಕ್ಷಣಕ್ಕಾಗಿ ವಿಶ್ವವಿದ್ಯಾನಿಲಯ ಕೇಂದ್ರಗಳೂ, ತಾಳಪತ್ರದ ಹಸ್ತಪ್ರತಿಗಳ ಹಿರಿಯ ಭಂಡಾರಗಳೂ ಇದ್ದವೆಂದು ತಿಳಿದುಬರುತ್ತದೆ

ಕ್ರಿ ಶ 19ನೇ ಶತಕದಲ್ಲಿ ಹಾಗೂ 20ನೇ ಶತಕದ ಮೊದಲಭಾಗದಲ್ಲಿ ಕಲ್ಕತ್ತ, ವಾರಣಾಸಿ, ದರ್ಭಾಂಗ, ಜೈಪುರ, ಮೈಸೂರು, ಕೊಚ್ಚಿನ್, ತಿರುವನಂತಪುರ ಮೊದಲಾದ ಸ್ಥಳಗಳಲ್ಲಿ ಆಂಗ್ಲ ಆಡಳಿತದಿಂದಲೂ, ಸ್ಥಳೀಯ ರಾಜರುಗಳಿಂದಲೂ ಸಂಸ್ಕೃತ ಮಹಾಪಾಠ ಶಾಲೆಗಳು ಸ್ಥಾಪಿಸಲ್ಪಟ್ಟವು ಪ್ರಾಚ್ಯ ಸಂಶೋಧನ ಕೇಂದ್ರಗಳೂ, ಪುಸ್ತಕ ಭಂಡಾರಗಳೂ ಸ್ಥಾಪಿಸಲ್ಪಟ್ಟವು ಬೊಂಬಾಯಿ ಕಲ್ಕತ್ತಗಳಲ್ಲಿ ರಾಯಲ್ ಏಷಿಯಾಟಿಕ್ ಸೊಸೈಟಿಗಳು ಸ್ಥಾಪಿತವಾದವು ದಕ್ಷಿಣದಲ್ಲಿ ಶೃಂಗೇರಿ, ಉಡುಪಿ, ಕೊಚ್ಚಿನ್, ಪುದುಕೋಟ್ಟೈಗಳಲ್ಲೂ ಉತ್ತರದಲ್ಲಿ ವಾರಣಾಸಿ, ದರ್ಭಾಂಗ, ಬರೋಡ ಮೊದಲಾದ ಎಡೆಗಳಲ್ಲಿಯೂ ವಿದ್ವತ್ ಸದಸ್‌ಗಳೂ, ವಾಕ್ಯಾರ್ಥ ಸದಸ್ಸುಗಳೂ ಸಂಯೋಜಿಸಲ್ಪಟ್ಟವು ಉತ್ತರದಲ್ಲಿ ಈಚೆಗೆ ಕೇಂದ್ರೀಯ ವಿದ್ಯಾಪೀಠಗಳೂ, ಸಂಸ್ಕೃತ ವಿಶ್ವವಿದ್ಯಾನಿಲಯಗಳೂ ಆರಂಭವಾದವು

ಆಂಗ್ಲರು ಭಾರತಕ್ಕೆ ಬಂದ ನಂತರ ಆಧುನಿಕ ವಿಶ್ವವಿದ್ಯಾನಿಲಯಗಳೂ ಕಾಲೇಜುಗಳೂ ಸ್ಥಾಪಿತವಾದವು ಈ ವಿಶ್ವವಿದ್ಯಾಲಯಗಳಲ್ಲಿ ಸಂಸ್ಕೃತ ಪೀಠಗಳೂ ಇದ್ದವು ವಿದೇಶೀಯರೂ ವೇದ ಶಾಸ್ತ್ರಗಳ ಬಗ್ಗೆ ಆಸಕ್ತರಾದರು ಅನೇಕ ಜರ್ಮನ್ ಹಾಗೂ ಫ್ರೆಂಚ್ ವಿದ್ವಾಂಸರು ಇವುಗಳನ್ನು ಅನುವಾದ ಮಾಡಿ, ಕೃತಿಗಳನ್ನು ಹಾಗೂ ಅಧ್ಯಯನ ಸಾರಗಳನ್ನು ಪ್ರಕಟಿಸಿದರು ಹೀಗಾಗಿ ಸಂಸ್ಕೃತ ಅಂತಾರಾಷ್ಟ್ರೀಯ ವಿಷಯವಾಯಿತು ವೇದ ಶಾಸ್ತ್ರಗಳ ಅಧ್ಯಯನಕ್ಕೆ ಪ್ರಾಚೀನ ಕಾಲದಲ್ಲಿ ಹಿರಿಯ ವಿದ್ವಾಂಸರುಗಳಾದ ಮ್ಯಾಕ್ಸ್ ಮುಲರ್, ವಿಟರ್‌ನಿಟ್ಸ್, ಡಸ್ಸೆನ್ ಮೊದಲಾದವರು ಬಹು ಸೇವೆಯನ್ನು ಮಾಡಿದರು

20ನೇ ಶತಕದ ದ್ವಿತೀಯಾರ್ಧದಲ್ಲಿ ವೇದ ಶಾಸ್ತ್ರಗಳ ಅಧ್ಯಯನದಲ್ಲಿ ಒಂದು ರೀತಿಯ ಹಿನ್ನಡೆಯುಂಟಾಗಿದೆ ಮೊದಲನೆಯದಾಗಿ ಎಲ್ಲ ಮಹಾಪಾಠಶಾಲೆಗಳಲ್ಲಿ, ಸಂಸ್ಥೆ - ಶಿಕ್ಷಣ ಕೇಂದ್ರಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕೊರೆಯಾಗುತ್ತಿದೆ ಎರಡನೆಯದಾಗಿ ಶಾಸ್ತ್ರಗಳ ಶಿಕ್ಷಕರ ಪಾಂಡಿತ್ಯದ ಮಟ್ಟ ಹಾಗೂ, ಬೋಧನೆಯಲ್ಲಿ ಆಸಕ್ತಿ ಗಮನಾರ್ಹವಾಗಿ ಕಡಮೆಯಾಗುತ್ತಿದೆ ಈ ಶತಕದ ಮೊದಲ ಭಾಗದಲ್ಲಿ ನಿರ್ಣಯಸಾಗರ, ಚೌಖಾಂಬಾ ಮೊದಲಾದವರಿಂದ ಸಂಸ್ಕೃತ ಪುಸ್ತಕಗಳು ಹಿರಿಯ ಪ್ರಮಾಣದಲ್ಲಿ ಪ್ರಕಟಗೊಂಡವು ಜೊತೆಗೇ ಬರೋಡಾ ಪ್ರಾಚ್ಯ ಪುಸ್ತಕ ಮಾಲೆ, ತ್ರಿವೇಂಡ್ರಂ ಪ್ರಾಚ್ಯ ಪುಸ್ತಕ ಮಾಲೆ, ಮೈಸೂರು ಪ್ರಾಚ್ಯ ಪುಸ್ತಕ ಮಾಲೆ ಮೊದಲಾದವು ಧಾರಾವಾಹಿಯಾಗಿ ಪ್ರಕಟವಾದವು ಈ ಸಂಸ್ಥೆಗಳಿಂದ ಪ್ರಕಟವಾದ ಪುಸ್ತಕಗಳು ಇಂದು ದೊರೆಯುವುದಿಲ್ಲ ಇಂದು ಈ ಪುಸ್ತಕಗಳು ಬೋಧನೆಗೆ ಅಧ್ಯಯನಕ್ಕೆ ಉಪಲಬ್ಧವಿಲ್ಲ ಒಳ್ಳೆಯ ಗ್ರಂಥಾ

ಲಯಗಳೂ ಇಲ್ಲ ಬಹುತೇಕ ಗ್ರಂಥಾಲಯಗಳು ಸಂಸ್ಕೃತ ಗ್ರಂಥಗಳನ್ನು ಹೊಂದಿರುವುದಿಲ್ಲ ಹಸ್ತ ಪ್ರತಿ ಗ್ರಂಥಭಂಡಾರಗಳು ಬಹುತೇಕ ದುಃಸ್ಥಿತಿಯ ಲ್ಲಿವೆ ಈ ಗ್ರಂಥ ಭಂಡಾರಗಳಲ್ಲಿನ ಹಸ್ತಪ್ರತಿಗಳು, ಸಂಸ್ಕೃತ ಪುಸ್ತಕಗಳು - ಅವುಗಳನ್ನು ಕಾಪಾಡಲು, ಪ್ರಕಟಿಸಲು ಸಾಕಷ್ಟು ಧನವಿಲ್ಲದೆ - ನಶಿಸಿ ಹೋಗುತ್ತಿವೆ ಪ್ರೌಢಶಾಲೆ ಕಾಲೇಜುಗಳ ಸಾಮಾನ್ಯ ಶಿಕ್ಷಣದ ಭಾಗವಾಗಿ ಸಂಸ್ಕೃತವನ್ನು ಅಭ್ಯಾಸ ಮಾಡುವಿಕೆಯ ಅವಕಾಶವನ್ನು ಅನೇಕ ರಾಜ್ಯಗಳು ತೆಗೆದುಹಾಕಿವೆ ಇದರಿಂದಾಗಿ ಸಂಸ್ಕೃತ ಪಂಡಿತರ ಉದ್ಯೋಗಾವಕಾಶಗಳು ಕಡಮೆಯಾಗಿವೆ ಸಂಸ್ಕೃತದಲ್ಲಿ ನಿಕ್ಷಿಪ್ತವಾಗಿರುವ ಜ್ಞಾನದ ಪರಿಮಾಣದ ಬಗ್ಗೆ ಸರಿಯಾದ ಅವಗಾಹನೆ ಇಲ್ಲದಿರುವಿಕೆಯೇ ಸಂಸ್ಕೃತ ಹಾಗೂ ಸಂಸ್ಕೃತ ಸಂಸ್ಥೆಗಳ ಬಗೆಗಿನ ಅನಾದರಣೆಗೆ ಕಾರಣವಾಗಿದೆ ಶಿಕ್ಷಣ ನೀತಿಯನ್ನು ನಿರೂಪಿಸುವವರು ಸಂಸ್ಕೃತದಲ್ಲಿ ಕೇವಲ ಕೆಲವು ಧರ್ಮಗ್ರಂಥಗಳು ಹಾಗೂ ಪುರಾಣಗಳು ಮಾತ್ರವೇ ಇವೆ ಎಂಬ ಅಭಿಪ್ರಾಯ ಹೊಂದಿದ್ದಾರೆ ಜೊತೆಗೆ ಈ ಭಾಷೆ ಪುರೋಹಿತರ ವರ್ಗದ ಭಾಷೆ ಎಂದೂ, ಆಧುನಿಕ ಜ್ಞಾನ ಅಥವಾ ಆಧುನಿಕ ಜೀವನಕ್ಕೆ ಬೇಕಾದ ಜ್ಞಾನ ಇದರಲ್ಲಿ ಇಲ್ಲವೆಂಬ ಅಭಿಪ್ರಾಯವನ್ನೂ ಹೊಂದಿದ್ದಾರೆ ಈ ಧೋರಣೆ ಈಗ ವಿಪರೀತ ಹರಡಿದೆ ಈ ಧೋರಣೆಯನ್ನು ದೂರಗೊಳಿಸಿ ಸಂಸ್ಕೃತದಲ್ಲಿನ ಜ್ಞಾನಸಂಪತ್ತಿನ ಬಗ್ಗೆ ಸದಭಿಪ್ರಾಯ ಮೂಡಿಸಬೇಕಾಗಿದೆ

ವೇದ ಹಾಗೂ ಶಾಸ್ತ್ರಗಳು ಮತೀಯ ಅರ್ಥದ ಧಾರ್ಮಿಕ ಪುಸ್ತಕಗಳು ಮಾತ್ರವೇ ಅಲ್ಲ ಇವುಗಳು ಅಮೇಯವಾದ ತಾತ್ವಿಕ, ಸಾಮಾಜಿಕ, ಸಾಂಸ್ಕೃತಿಕ, ಚಾರಿತ್ರಿಕ ಹಾಗೂ ವೈಜ್ಞಾನಿಕ ತಿಳಿವನ್ನು ಒಳಗೊಂಡಿವೆ ವೇದಗಳು ಪ್ರಕೃತಿಯ ದೇವತೆಗಳಿಗೆಂದು ಮಾಡಿದ ಪ್ರಾರ್ಥನೆಗಳು ಮಾತ್ರವೇ ಅಲ್ಲ ಇವು ಒಂದು ಇಡೀ ನಾಗರಿಕತೆಯನ್ನು ಆ ನಾಗರಿಕತೆಯ ಎಲ್ಲ ಮುಖಗಳನ್ನು ಪ್ರತಿನಿಧಿಸುತ್ತವೆ ವೇದಾಂತ ತತ್ವವು ವಿಶ್ವದ ಪ್ರಕೃತಿಯ ಬಗ್ಗೆಯೂ ಮನುಷ್ಯನ ಬಗ್ಗೆಯೂ, ಇವೆರಡರ ನಡುವಿನ ಕೇಂದ್ರ ಸೂತ್ರವನ್ನೂ ಕುರಿತು ತೀವ್ರ ಚಿಂತನೆಗೆ ತೊಡಗುತ್ತದೆ ಪಾಣಿನೀಯ ಸೂತ್ರಗಳು, ಅವುಗಳ ಮೇಲಿನ ಪತಂಜಲಿಯ ಭಾಷ್ಯ, ಭರ್ತೃಹರಿಯ ವಾಕ್ಯಪದೀಯ ಹಾಗೂ ಮತ್ತಿತರ ಸಂಸ್ಕೃತ ವ್ಯಾಕರಣಗ್ರಂಥಗಳು ಭಾಷೆಯನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದ್ದು, ಆಧುನಿಕ ಭಾಷಾಶಾಸ್ತ್ರದ ಪರಿಶೋಧನೆಗಳಿಗಿಂತಲೂ ಮೇಲ್ಮಟ್ಟದವು ಎಂದು ಪರಿಗಣಿತವಾಗಿವೆ ಬಂಗಾಳದಲ್ಲಿ ಮೊದಲಿಗೆ ನಂತರ ಆಂಧ್ರ, ಕರ್ನಾಟಕ, ಚೋಳ ಪ್ರಾಂತಗಳಲ್ಲಿ ಬೆಳೆದು ಬಂದ ನವ್ಯನ್ಯಾಯವು ಗಣಿತದ ಖಚಿತತೆಯನ್ನು ಹೊಂದಿದೆ ಇದೊಂದು ಸಾಂಕೇತಿಕ ಭಾಷೆ ಈ ತಾತ್ವಿಕ ಜ್ಞಾನ ಶಾಖೆಗಳೇ ಅಲ್ಲದೆ ಕೌಟಿಲ್ಯನ ಅರ್ಥಶಾಸ್ತ್ರದಂತಹ ರಾಜ್ಯಶಾಸ್ತ್ರ, ಭರತನ ನಾಟ್ಯಶಾಸ್ತ್ರ ಆನಂದವರ್ಧನನ ಧ್ವನ್ಯಾಲೋಕಗಳಂತಹ ಅಲಂಕಾರ ಶಾಸ್ತ್ರ, ನ್ಯಾಯಶಾಸ್ತ್ರದ ಬಗ್ಗೆ ಯಾಜ್ಞವಲ್ಕ್ಯಸ್ಮೃತಿಯ ವ್ಯವಹಾರ ಅಧ್ಯಾಯಗಳು ಮತ್ತಿತರ ಜೀವನದ ಜಾತ್ಯತೀತ ಮುಖಗಳ ಬಗ್ಗೆ ಮಹತ್ವದ ಕೃತಿಗಳಿವೆ, ಖಗೋಳ ಹಾಗೂ ಗಣಿತಗಳ ಬಗೆಗಿನ ಕೃತಿಗಳು ಪ್ರಸಿದ್ಧವಾಗಿವೆ ಲಲಿತ ಕಲೆಗಳಾದ ಸಂಗೀತ, ಶಿಲ್ಪಶಾಸ್ತ್ರ, ರಾಸಾಯನ ಶಾಸ್ತ್ರ, ವಜ್ರ ವಿಭಜನ ವಿಜ್ಞಾನ, ಲೋಹಲೇಪನ ಇತ್ಯಾದಿಗಳ ಬಗ್ಗೆಯೂ ಬಹುಸಂಖ್ಯೆಯ ಕೃತಿಗಳಿವೆ ಹೀಗೆ ಐದುಸಾವಿರ ವರ್ಷಗಳಿಗಿಂತಲೂ ಹಿಂದೆ ಭರತ ಭೂಮಿಯಲ್ಲಿ ಪ್ರಚಲಿತವಿದ್ದ ನಾಗರಿಕತೆಯ ಎಲ್ಲ ಮುಖಗಳನ್ನೂ ಸಂಸ್ಕೃತ ಕೃತಿಗಳು ಪ್ರತಿನಿಧಿಸುತ್ತವೆ ಭಾರತೀಯವಲ್ಲದ ಮೌಲ್ಯಗಳು ಹಾಗೂ ರೋಮನ್ ಶಾಸನಗಳ ಆಧಾರದಲ್ಲಿ ಭರತಭೂಮಿಯಲ್ಲಿ ಸಾಮಾಜಿಕ ವ್ಯವಸ್ಥೆಯನ್ನು ಉಂಟುಮಾಡಲು ಪ್ರಯತ್ನಿಸಿದ್ದು ಆಂಗ್ಲ ಆಡಳಿತ 19, 20ನೇ ಶತಕದ ಬುದ್ಧಿ ಜೀವಿಗಳು ಭಾರತೀಯ ಜೀವನ ಹಾಗೂ ಸಂಸ್ಕೃತಿಯ ಆರಂಭ ಇಲ್ಲಿನಿಂದಲೇ ಎಂದು ನಿಶ್ಚಯಿಸಿ, ಮಹತ್ವಪೂರ್ಣವಾದ ಭಾರತೀಯ ಸಂಸ್ಕೃತಿಯನ್ನು ಹೀನಾಯವೆನ್ನುವಂತೆ ದುರ್ಲಕ್ಷ್ಯ ಮಾಡಿದರು ಇದರಿಂದಾಗಿ ಭಾರತೀಯರು ತಮ್ಮದೇ ಮಾತೃಭೂಮಿಯಲ್ಲಿ ವಿದೇಶೀಯರಾಗಿದ್ದಾರೆ ಆದರೆ ಯಾವುದೇ ಸಮಾಜವೂ ಎರವಲು ಪಡೆದ ತಲೆ ಹಾಗೂ ಕಾಲಿಲ್ಲದ ದೇಹದಿಂದ ಉಳಿಯಲಾರದು ಹಾಗಾಗಿ ನಮ್ಮ ಭಾರತೀಯತೆಯನ್ನು ನಾವು ಮರಳಿ ಪಡೆಯಬೇಕಿದೆ ನಮ್ಮ ಭಾರತೀಯತೆಯನ್ನು ಪುನರುದ್ಧಾರ ಗೊಳಿಸಿಕೊಳ್ಳುವ ಮತ್ತು ನಮ್ಮ ಸಂಸ್ಕೃತಿಯನ್ನು ಪುನಃಪರಿಶೋಧಿಸುವ ಏಕಮೇವ ಮಾರ್ಗವೆಂದರೆ ನಮ್ಮ ಶಾಸ್ತ್ರಾಧ್ಯಯನವನ್ನು ಪುನರುದ್ಧಾರಗೊಳಿಸಿ ನಮ್ಮ ಶಾಸ್ತ್ರೀಯ ಜ್ಞಾನವನ್ನು ಬಲಪಡಿಸಿಕೊಳ್ಳುವುದಾಗಿದೆ

ಶಾಸ್ತ್ರಾಧ್ಯಯನ ಅಗತ್ಯವಾಗಲು ಇನ್ನೂ ಒಂದು ಕಾರಣವುಂಟು ನಮ್ಮ ಭಾವೈಕ್ಯತೆಯನ್ನು ಪರಿರಕ್ಷಿಸುವುದೇ ಈ ಅಗತ್ಯ ಭಾರತದ ಸಂಸ್ಕೃತಿಯ ಹಾಗೂ ಭಾವೈಕ್ಯತೆಗಳನ್ನು ಸಾಧಿಸುವಲ್ಲಿ ಸಂಸ್ಕೃತ ಮುಖ್ಯ ಪಾತ್ರ ನಿರ್ವಹಿಸಿದೆ ನಮ್ಮಲ್ಲಿನ ಮಹತ್ವದ ಕೃತಿಗಳ ಭೌಗೋಳಿಕ ಹರವನ್ನು ಗಮನಿಸಿದರೂ ಸಾಕು, ನಮ್ಮ ಶೈಕ್ಷಣಿಕ ಜೀವನ ಇಡೀ ಭಾರತದಲ್ಲಿ ಹೇಗೆ ವಿಸ್ತರಿಸಿ, ಬೌದ್ಧಿಕ ಮತ್ತು ಸಾಂಸ್ಕೃತಿಕ ಏಕತೆಯನ್ನುಂಟು ಮಾಡಿದೆಯೆಂಬುದು ಮನದಟ್ಟಾಗುತ್ತದೆ ಬಾದರಾಯಣರ ವೇದಾಂತ ಸೂತ್ರಗಳ ರಚನೆ ಬದರಿಕಾಶ್ರಮದಲ್ಲಿ ಆದರೆ, ಅವುಗಳ ಭಾಷ್ಯಗಳ ರಚನೆ ಶಂಕರ, ರಾಮಾನುಜ, ಮಧ್ವ, ವಲ್ಲಭ, ನಿಂಬಾರ್ಕರಿಂದ ಕೇರಳ, ಚೋಳಮಂಡಲ, ಕರ್ನಾಟಕ, ಗುಜರಾತ್‌ಗಳಲ್ಲಿ ಆಯಿತು ಪಾಣಿನಿಯ ಸೂತ್ರಗಳ ರಚನೆ ಕಾಶ್ಮೀರದಲ್ಲಿ ನಡೆದರೆ, ಪತಂಜಲಿಯ ಭಾಷ್ಯರಚನೆ ದಕ್ಷಿಣದ ಚಿದಂಬರದಲ್ಲಿ ನಡೆಯಿತು ನವ್ಯನ್ಯಾಯ ಬಂಗಾಳದಲ್ಲಿ ಆರಂಭವಾದರೆ, ಕರ್ನಾಟಕ ಆಂಧ್ರಗಳಲ್ಲಿ ಬೆಳೆಯಿತು ಅಲಂಕಾರ ಶಾಸ್ತ್ರದ ಮೊದಲ ಹಂತ ಕಾಶ್ಮೀರದಲ್ಲಿಯಾದರೆ, ನಂತರದ ಬೆಳವಣಿಗೆ ದಕ್ಷಿಣದಲ್ಲಿ ಅಂದಿನ ದಿನಗಳ ನಿಧಾನಗತಿಯ ಸಂಪರ್ಕ ಮತ್ತು ಕಾಲುನಡಿಗೆಯ ಪ್ರಯಾಣ ಸೌಕರ್ಯಗಳ ನಡುವೆಯೂ ಒಂದು ಶಾಸ್ತ್ರೀಯ ಕೃತಿ ದೂರದೂರದ ಭಾಷ್ಯಕಾರ, ವಿಮರ್ಶಕರನ್ನು ಹೇಗೆ ಆಕರ್ಷಿಸಿದವು ಎಂಬುದು ಯಾರಿಗಾದರೂ ಅಚ್ಚರಿಯ ಸಂಗತಿಯಾಗುತ್ತದೆ ಇಡೀ ಭಾರತದ ಶಿಕ್ಷಕ ವರ್ಗ ಬಹು ಜಾಗ್ರತೆಯಿಂದಿದ್ದು, ತತ್‌ಕ್ಷಣ ಪ್ರತಿಸ್ಪಂದಿಸುತ್ತ, ಪರಸ್ಪರ ನಿತ್ಯ ಸಂಬಂಧ ಹೊಂದಿದ್ದಿತೆಂದು ತಿಳಿಯಬೇಕು ಇದರಿಂದಾಗಿ ಸಾಂಸ್ಕೃತಿಕ, ಬೌದ್ಧಿಕ, ಭಾವನಾತ್ಮಕ ಏಕತೆಗಳಿಗೆ ಮಹತ್ವ ಪೂರ್ಣ ಬೆಂಬಲ ದೊರೆಯುವಂತಾಯಿತು ಹೀಗಾಗಿ ನಮ್ಮ ಶಾಸ್ತ್ರಗಳಲ್ಲಿನ ಶ್ರೀಮಂತವಾದ ಜ್ಞಾನವನ್ನು ಕಾಪಾಡಲೂ, ನಮ್ಮಲ್ಲಿನ ಬೌದ್ಧಿಕ ಭಾವನಾತ್ಮಕ ಏಕತೆಗಳನ್ನು ಬಲಪಡಿಸಲೂ, ನಮ್ಮ ಶಾಸ್ತ್ರಗಳ ಅಧ್ಯಯನ ಹಾಗೂ ಜ್ಞಾನಗಳು ಬಹು ಮುಖ್ಯವಾಗಿವೆ ✳

ಹಸಿರಿದ್ದರೆ ಉಸಿರು

ಹಸಿರಿದ್ದರೆ ಬೆಳಸು

ಹಸಿರಿದ್ದರೆ ಉಣಿಸು

"ವೃಕ್ಷೋ ರಕ್ಷತಿ ರಕ್ಷಿತಃ"

ಹಸಿರನ್ನು ಕಾಪಾಡಿ

ಅದು ನಿಮ್ಮನ್ನು ಕಾಪಾಡುತ್ತದೆ

# ಆಗಮ ಶಾಸ್ತ್ರಗಳು-ಅಧ್ಯಯನ ದೃಷ್ಟಿ

ಆಗಮಗಳು ಪ್ರಮುಖವಾಗಿ ಧಾರ್ಮಿಕ ಗುಣ ಹೊಂದಿದ ಪ್ರಾಚೀನ ಸಾಹಿತ್ಯ ಅವುಗಳ ವಿಷಯ ಇಡೀ ಶಿಕ್ಷಣದ ಪರಿಧಿಯನ್ನು ಒಳಗೊಳ್ಳುತ್ತದೆ ಜ್ಯೋತಿಷ್ಯ ಶಾಸ್ತ್ರ, ದೇವಾಲಯ ನಿರ್ಮಾಣ, ಶ್ರಾದ್ಧ ವಿಧಿಗಳು, ವಿಗ್ರಹಾರಾಧನೆ, ಪವಿತ್ರೀಕರಣ ಮೊದಲಾದ ವಿಷಯಗಳನ್ನು ಆಗಮವರ್ಗಗಳು ಒಳಗೊಳ್ಳುತ್ತವೆ ಪ್ರಾಯೋಗಿಕ ಧರ್ಮದ ವಿಶೇಷ ಅವಧಾರಣೆ ಹೊಂದಿ ತಾತ್ವಿಕ ವಿಷಯಗಳು ಯಾವುದೇ ವ್ಯಾಪಕ ವಿವರಣೆಯನ್ನೂ ಪಡೆಯುವುದಿಲ್ಲ

ಈ ನಿಟ್ಟಿನಲ್ಲಿ ಅವು ವೇದಗಳಂತೆಯೇ ವಿಶಿಷ್ಟ ಗುಣಗಳನ್ನು – ವೇದಗಳಲ್ಲಿ ಹಾಗೂ ವೈದಿಕ ಸಾಹಿತ್ಯದಲ್ಲಿ ಕಂಡುಬರುವಂತೆಯೇ – ಪಡೆದಿವೆ ಸಮಾಜದಲ್ಲಿ ಅನುಸರಿಸುವವರ ಅಪೇಕ್ಷೆ, ಆಸಕ್ತಿ, ಮತ್ತು ಉಪಕರಣಗಳ ಉಪಸ್ಥಿತಿಗಳ ಅನುಸಾರವಾಗಿ ತಾತ್ವಿಕ ಹಾಗೂ ಪ್ರಾಯೋಗಿಕ ವೈವಿಧ್ಯವನ್ನು ಹೊಂದಿ ಧಾರ್ಮಿಕ ಅನುಸಂಧಾನ, ಸಮಾಜದ ಒಂದು ಅಂಗವಾಗುತ್ತದೆ ಹಾಗಾಗಿ ಆಗಮಗಳು ಜನರ ಆಶೋತ್ತರಗಳನ್ನು ಪ್ರತಿಬಿಂಬಿಸುತ್ತವೆ ಇದೇ ಮಾತನ್ನು ವೈದಿಕ ಸಾಹಿತ್ಯದ ಬಗ್ಗೆ ಹೇಳಲಾಗದು ವೇದಗಳು – ಅವುಗಳನ್ನಾಧರಿಸಿದ ವೈದಿಕ ವಿಧಿಗಳು ಅವುಗಳ ಆಚರಣೆ ಕೆಲವೇ ಮಂದಿಗೆ – ಸಾಮಾನ್ಯವಾಗಿ ಬ್ರಾಹ್ಮಣ ವರ್ಗಕ್ಕೆ – ಸೀಮಿತವಾದದ್ದು ಇಡೀ ಜನಸಂಖ್ಯೆಯ ಅರ್ಧಭಾಗದಷ್ಟು ಪ್ರಮಾಣದ ಸ್ತ್ರೀಯರು, ಮತ್ತು ಬ್ರಾಹ್ಮಣರಲ್ಲದವರು ವೈದಿಕ ಆಚರಣೆಗಳ ಪರಿಧಿಯಲ್ಲಿ ಬರುವುದಿಲ್ಲ ನ್ಯಾಯ ಶಾಸ್ತ್ರಕೃತಿಗಳು .(ಸ್ಮೃತಿಗಳು) ಕಲ್ಪಸೂತ್ರದ ಆಧಾರಹೊಂದಿದ್ದು ಧರ್ಮದ ವೈದಿಕ ಗುಣಗಳನ್ನು ಕಾಪಾಡುವ ಗುರಿಯಿಂದಾದ ಪವಿತ್ರ ಹಾಗೂ ಪ್ರಾಚೀನವಾದ ವಿಧಿಗಳ ವಿವರಣೆಯಾಗಿವೆ ಆಗಮಗಳು ತಮ್ಮ ಒಳಗನ್ನು ಎಲ್ಲ ಜನರಿಗೂ ತೆರೆದು, ವೇದ ಪಠ್ಯಗಳು ಧಾರ್ಮಿಕ ವಿಧಿಗಳನ್ನು ನೆರವೇರಿಸುವಲ್ಲಿ ನಿಶ್ಚಿತ ಪಡಿಸಿದ ಮಿತಿಗಳನ್ನು ಮೀರಿ ನಡೆದರೂ, ವೈದಿಕ ತತ್ವಕ್ಕಾಗಿ ಯಾಗಲೀ, ವೈದಿಕ ಅಧಿಕಾರಕ್ಕಾಗಲೀ ವಿರುದ್ಧವಾಗಿ ನಡೆಯವು ವಾಸ್ತವವಾಗಿ ಆಗಮಗಳಲ್ಲಿ ವ್ಯಾವೃತವಾದ ಅನೇಕ ಆಚರಣೆಗಳು ವೇದಗಳ ಆಧಾರದಿಂದ ಆದವುಗಳೇ ಆಗಿವೆ

ಆಗಮಗಳಲ್ಲಿ ಚಿತ್ರಿತವಾಗಿರುವ ವಿಶಿಷ್ಟವಾದ ಲಕ್ಷಣಗಳಲ್ಲಿ ಒಂದೆಂದರೆ "ಶಕ್ತಿ"ಯ ಚೈತನ್ಯ ಸ್ತ್ರೀ ತತ್ವ ಮೂಲಪ್ರಕೃತಿಯು ಮಹತ್, ಅಹಂಕಾರ ತನ್ಮಾತ್ರ ಮೊದಲಾದ ಪರಿವರ್ತನೆ ಹೊಂದಿದ್ದೇ ಸೃಷ್ಟಿಯ ಮೂಲತತ್ವ ಎಂಬುದು ಸಾಂಖ್ಯ ಸಿದ್ಧಾಂತ ಅಚಲವಾದ ಅಚೇತನ ವಸ್ತು ಸಚೇತನ ಚಾಲನೆಯಿಲ್ಲದೆ – ನಿರ್ದೇಶನವಿಲ್ಲದೆ ತಂತಾನೆ ಉತ್ಕರ್ಷ ಹೊಂದಲು ಹೇಗೆ ಸಾಧ್ಯ? ವಸ್ತುಗಳು ಒಂದು ಬೌದ್ಧಿಕ ಕಾರ್ಯಭಾರದ ನಿಯಂತ್ರಣದಿಂದ ಮಾತ್ರ ಕ್ರಿಯಾಶೀಲವಾಗಲು ಸಾಧ್ಯ ಸೇಶ್ವರ ಸಾಂಖ್ಯ ಪದ್ಧತಿಯಲ್ಲಿ – ಮಹಾಭಾರತದಲ್ಲಿ ದಾಖಲಾಗಿರುವಂತೆ – ದೇವರು ವಿಶ್ವಗತಿಗಾಗಿ ವಸ್ತುವನ್ನು ಬಳಸಿದ ಕರ್ತೃ ಆದರೆ ಇದು ಉಪನಿಷತ್ತುಗಳ ಬೋಧನೆಗೆ ವಿರುದ್ಧವಾಗುತ್ತದೆ (ಬಹುಸ್ಯಾಂ ಪ್ರಜಾಯಯೇತಿ) (ತತ್ ತೇಜೋಽ ಸೃಜತ – ಛಾಂದೋಗ್ಯ – 6–2–3) ಅಕರ್ಮಕ ಬ್ರಹ್ಮ ಎಂದು ಹೇಳಿದ ಮೇಲೂ ಅದು ಅನೇಕವಾಗ ಬಗೆಯುವುದು ಹೇಗೆ ಸಾಧ್ಯ? ಪ್ರಕೃತಿಯನ್ನು ಕ್ರಿಯಾಶೀಲವೆಂದೂ ಬಗೆಯುವುದರ ಮೂಲಕ ಆಗಮಗಳು ಈ ಅಂಶವನ್ನು ತೀರ್ಮಾನಿಸಲು ಬಗೆದವು ಬ್ರಹ್ಮವನ್ನು ಶಕ್ತಿಯೆಂದು ಕರೆದು ಇದು ಸಚೇತನ ಮತ್ತು ಅಚೇತನವೆರಡೂ ಆಗಿದೆಯೆಂದರು ಸಚೇತನ ಅಂಶ ಬ್ರಹ್ಮನೊಡನೆ ಎಂದಿಗೂ ಇರುವಂತಹದು ಬ್ರಹ್ಮ ಮತ್ತು ಶಕ್ತಿ ಒಂದೇ ನಿಜದ ಎರಡು ಅಂಶ ಏಕ ಸೂತ್ರಬದ್ಧವಾದ ಪೂರ್ಣಕಾರಕ ಕರ್ತೃ

ಆಗಮಗಳ ಕಾಲ ಹಾಗೂ ಹುಟ್ಟನ್ನು ಕುರಿತಂತೆ ಪಾಶ್ಚಾತ್ಯ ವಿದ್ವಾಂಸರು ಮೌಲಿಕವಾದ ಪಂತಿಗೆಯನ್ನು ಸಲ್ಲಿಸಿದ್ದಾರೆ ಅವುಗಳ ಬಗ್ಗೆ ಹಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸಲಾಗಿದೆ ಪಾಶ್ಚಿಮಾತ್ಯ ವಿದ್ವಾಂಸರು ಭಾರತೀಯ ಇತಿಹಾಸ ತತ್ವಶಾಸ್ತ್ರಗಳ ಬಗ್ಗೆ ಬರೆಯಲು ಆರಂಭಿಸಿದಾಗಿನಿಂದ ಅವುಗಳಲ್ಲಿ ಎರಡು ಪ್ರಮುಖ ಲಕ್ಷಣಗಳನ್ನು ಗಮನಿಸಬಹುದಾಗಿದೆ ಮೊದಲನೆಯದೆಂದರೆ ಯಾವುದೇ ಸಾಹಿತ್ಯದ ಪ್ರಯತ್ನವೂ ಪ್ರಾಚೀನವಾಗಿಯೇ ಇರಬೇಕೆಂದೇನಿಲ್ಲವೆಂಬುದು ಉದಾಹರಣೆಗೆ ಮಹಾಭಾರತವು ಪರಿಪೂರ್ಣ ಪ್ರಮಾಣದಲ್ಲಿ ಸಂಕಲಿತವಾದದ್ದು – ಕಲಿಯುಗದ ಆರಂಭದಲ್ಲಿ – ಎಂದರೆ ಕ್ರಿ ಪೂ 3101 ವರ್ಷಗಳ ಹಿಂದೆಯಲ್ಲ, ಕ್ರಿಸ್ತ ಶಕದ ಆರಂಭಕ್ಕೆ ಮೊದಲು ಹಲವಾರು ಶತಮಾನಗಳ ಹಿಂದೆ ಮಾತ್ರವೇ ಎಂಬುದು ಅದರ ಅಧ್ಯಯನದ ಎಲ್ಲ ಶಾಖೆಗಳನ್ನೂ ಆಧಾರಗಳನ್ನೂ, (ಹಲವು ಸಂಭವನೀಯತೆಗಳನ್ನೂ ಹೊರಪಡಿಸಿ) ಕ್ರಿಸ್ತಶಕದ ಆರಂಭದ ಹೊತ್ತಿನಲ್ಲಿಡಬೇಕು ಎರಡನೆಯದೆಂದರೆ ಭಾರತದಲ್ಲಿ ಯಾವುದೇ ಪರಿಕಲ್ಪನೆ, ತತ್ವ, ಪದ್ಧತಿಯೂ ಭಾರತೀಯವೇ ಆಗಿ ಎಂದೂ ಬೆಳೆದಿಲ್ಲ ಎಲ್ಲ ಕಾಲದಲ್ಲೂ ಎಲ್ಲ ಸ್ಥಳಗಳಲ್ಲೂ, ಗ್ರೀಕ್ ಅಥವಾ ಪರ್ಶಿಯನ್ ಅಥವಾ ಚೀನಿ ಬರಹಗಳ ಪ್ರಭಾವಗಳು ಇದ್ದೇ ಇದ್ದವು ಬೌದ್ಧ ಪ್ರಭಾವ ತನಗೆ ತಾನೇ ಸಾಟಿಯಾದದ್ದು, ಈ ವಿಷಯದ ಬಗ್ಗೆ ಪಾಶ್ಚಾತ್ಯ ಪೌರಾತ್ಯ ಲೇಖಕರು ಬಹಳ ಬರೆದದ್ದಾಗಿದೆ ಕಲ್ಪನೆಗಳು ಬಹುಳವಾಗಿವೆ ಅವೆಲ್ಲ ನಂಬಲರ್ಹವಾದ ಸಾಕ್ಷ್ಯಾಧಾರದವುಗಳಲ್ಲ ಭಾರತೀಯರನ್ನು ತಮ್ಮ ಹದ್ದುಬಸ್ತಿನಲ್ಲಿಡಲು ಮೇಲಿನ ಅಭಿಪ್ರಾಯಗಳನ್ನು ನೀಡುವುದೇ ಲೇಖಕರ ಗುರಿಯಾಗಿದೆ ಹಿಂದೂ ಅಥವಾ ಭಾರತೀಯ ಸಂಸ್ಕೃತಿಯ ಅನೇಕ ಅಂಗಗಳಿಗೆ ಬೌದ್ಧ ಕಾಣಿಕೆ ನಿಸ್ಸಂದೇಹವಾಗಿ ಮೌಲಿಕವಾದದ್ದೇ ಆದರೆ ಹೈಂದವ ಸಂಸ್ಕೃತಿ ಆದರ್ಶಗಳು ಬೌದ್ಧ ಸಂಸ್ಕೃತಿಗಿಂತ ಕೀಳ್ತರದ್ದು, ಬೌದ್ಧ ಪ್ರಭಾವದಿಂದಾಗಿ ನಿಧಾನವಾಗಿ ಬೆಳೆದು ಬಂದದ್ದು, ಎನ್ನುವುದು ಅನ್ಯಾಯದ ಕ್ರಮ ಹಿಂದೂತ್ವದ ಒಂದು ಶಾಖೆಯೇ ಬೌದ್ಧ ಧರ್ಮ ಹಾಗೂ ಹಿಂದೂ ಮೂಲಗಳಿಂದ ಬಹಳಷ್ಟು ಪ್ರಭಾವಿತವಾಗಿರಬೇಕು ಜೀವನದ ಹಲವು ಅಂಶಗಳಿಗೆ ಗಮನನೀಡಬೇಕು ಯಾವನೇ ಮನುಷ್ಯನಾಗಲೀ, ಜನತೆಯ ಸಮೂಹವಾಗಲೀ ಪರಿಸರದಿಂದ ಪ್ರಭಾವಿತವಾಗದೆ ಪ್ರತ್ಯೇಕವಾಗಿ ಬೆಳೆದು ಬಂದಿಲ್ಲ ಹೀಗೆ ಹಿಂದೂತ್ವ ಮತ್ತು ಈ ಸಂಸ್ಕೃತಿ ತನ್ನ ಮೂಲತತ್ವಗಳ ಪುರೋಗಾಮಿತ್ವಕ್ಕೆ ತಕ್ಕ ಪ್ರಭಾವಗಳನ್ನು ಪಡೆದಿರಬೇಕಷ್ಟೆ ಆದರೆ ಈ ಅಂಶದಿಂದ ಹೈಂದವ ಸಂಸ್ಕೃತಿಯಲ್ಲಿ ಅಂತಹ ತತ್ವಗಳೇ ಇರಲಿಲ್ಲವೆಂದೂ ಅವುಗಳನ್ನು ಪಾಶ್ಚಾತ್ಯ, ಪೌರಾತ್ಯ, ಔತ್ತರೇಯ ಪ್ರಾಂತ್ಯಗಳಿಂದ ಪಡೆಯಿತೆಂದೂ ನಿರೂಪಿಸಲಾಗದು

**ಪ್ರೊ|| ವಿ ವರದಾಚಾರಿ ಪಾಂಡಿಚೇರಿ**

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ)ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ
* ಸರತಿಯ ಸಾಲಿನ ಕೋಣೆಗಳಿಂದ  ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ  ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ
* ಯಾತ್ರಿಕರ ವಾಚನಾಭರುಚಿಯನ್ನು ಹೆಚ್ಚಿಸುವ ತಿ ತಿ ದೇ  ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ
* ಸರತಿಯ ಸಾಲಿನ ಯಾತ್ರಿಕರಿಗೆ  ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ, ಕ್ಯಾಂಟೀನ್
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ  ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ**

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮-೩೦ ಗಂಟೆಯವರೆಗೆ ಕೆಲಸಮಾಡುತ್ತದೆ  ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧-೦೦ ಗಂಟೆಯವರೆಗೆ ಕೆಲಸಮಾಡುತ್ತದೆ

ಆಗಮಗಳು – ಅವು ಭಾರತೀಯವೆಂದೂ, ಕಾಶ್ಮೀರ ಅದರ ತವರೆಂದೂ ತಿಳಿಯ ವಡಿಸುತ್ತವೆ ಅವುಗಳು ಹುಟ್ಟಿದ ಕಾಲದ ಬಗ್ಗೆ ಚರ್ಚಿಸಲು ಸಾಕಷ್ಟು ಆಧಾರಗಳಿಲ್ಲ ಅವುಗಳ ತತ್ವಗಳು ಕ್ರಿ.ಪೂ 3100 ರಲ್ಲಿ ಕೊನೆಗೊಂಡ ದ್ವಾಪರಯುಗ ಮೂಲವಾಗಿರಬೇಕು ಆದರೆ ನಂತರದ ಕಾಲದಲ್ಲಿ ಅವುಗಳು ಖಚಿತ ರೂಪ ಪಡೆದಿರಬೇಕು

ವೈದಿಕ ಸಂಸ್ಕೃತಿ ಯಜ್ಞಯಾಗಾದಿಗಳ ಆಚರಣೆಯಿಂದ ಅತ್ಯುನ್ನತವಾದ ಮನುಷ್ಯ ಬಿಡುಗಡೆಯನ್ನು ಪಡೆಯಲು ಸಾಧನಾ ಮಾಧ್ಯಮಗಳನ್ನು ತಿಳಿಸುತ್ತವೆ ಇನ್ನೊಂದೆಡೆ ಆಗಮಗಳು ಪುರೋಗತಿಯ ಸಾಧನಗಳನ್ನು ತಿಳಿಸುತ್ತವೆ ಈ ಕೆಲಸ ಮಾಡುತ್ತಲೇ ಅವು ಬದುಕಿನ ಎಲ್ಲ ಹಂತಗಳನ್ನೂ – ಕಲ್ಪಸೂತ್ರಗಳಲ್ಲಿ ತಿಳಿಸಿರುವಂತೆ ಜನನ ಕ್ರಿಯೆಯಿಂದ ಮರಣೋತ್ತರ ಕ್ರಿಯೆಯವರೆಗೆ ಎಲ್ಲ ಹಂತಗಳನ್ನೂ – ಒಳಗೊಳ್ಳುತ್ತವೆ ಆರೋಗ್ಯಕರವೂ ಅಭಿವೃದ್ಧಿದಾಯಕವೂ ಆದ ಜೀವನದ ಸಾಧನಗಳನ್ನೂ, ಮಾರ್ಗಗಳನ್ನೂ, ವಿಧಿನಿರ್ವಹಣೆಯನ್ನೂ, ನಿತ್ಯ ನೈಮಿತ್ತಿಕ ಕ್ರಿಯೆಗಳನ್ನೂ ಕುರಿತು ವಿವರಣೆಗಳಿವೆ ಪವಿತ್ರಾಗ್ನಿಯ ಆರಾಧನೆ, ಮರಣ ಹೊಂದಿದವರ ನೆನಪಿನಲ್ಲಿ ಮಾಡುವ ಶ್ರಾದ್ಧಕ್ರಿಯೆಗಳು ಪ್ರಧಾನ್ಯ ಪಡೆಯುತ್ತವೆಯಾದರೂ ಎಲ್ಲವೂ ಆಗಮಗಳ ಧೋರಣೆಯಿಂದ ಎಂದರೆ ಧಾರ್ಮಿಕ ಹಿನ್ನೆಲೆಯಲ್ಲಿ – ಮುಖ್ಯವಾಗಿ ದೈವಾರಾಧನೆಯಲ್ಲಿ ಆಸಕ್ತವಾದ– ಧಾರ್ಮಿಕ ಹಿನ್ನೆಲೆಯಲ್ಲಿ ವಿವರಣೆ ಹೊಂದುತ್ತವೆ

ಈ ಸಂಬಂಧದಲ್ಲಿ ಏಳಬಹುದಾದ ಹಾಗೂ ಅಧ್ಯಯನ ಮಾಡಬೇಕಾದ ಪ್ರಶ್ನೆಯೆಂದರೆ ಆಗಮಗಳ ಹುಟ್ಟಿನಲ್ಲಿ ಬುಡಕಟ್ಟುಗಳ ಪ್ರಭಾವ ಆಗಮಗಳು ಆರು ಕ್ರೂರ ಕ್ರಿಯೆಗಳನ್ನು – ಉಚ್ಚಾಟನ, ಮಾರಣ, ವಿದ್ವೇಶನ, ಸ್ತಂಭನ, ವಶ್ಯ, ಮತ್ತು ಶಾಂತಿಗಳನ್ನೂ, ಕುಯಕ್ಷಿಣಿಯನ್ನೂ ವಿವರಿಸುತ್ತವೆ ಇವು ಯಾವುದೇ ನಾಗರಿಕ ಜೀವನದ ಭಾಗವೂ ಆಗುವುದಿಲ್ಲ ಪ್ರಾಯೋಗಿಕ ಧರ್ಮವಾಗಿ ಬೆಳೆಯುತ್ತಿದ್ದಾಗ ಬುಡಕಟ್ಟುಗಳ ಜೀವನದ ಈ ಲಕ್ಷಣಗಳನ್ನು ರೂಢಿಸಿಕೊಂಡಿರಬೇಕು ಆಗಮಗಳು ಈ ಪ್ರಕ್ರಿಯೆಗಳನ್ನೂ ಕುರಿತು ಹೇಳುತ್ತವೆ ಎಂಬುದನ್ನು ಒಪ್ಪುತ್ತಲೇ ಐಹಿಕ ಸುಖ ತತ್ವ ಹಾಗೂ ಪಾರಮಾರ್ಥಿಕತೆಗಳ ನಡುವೆಯಿರುವ ವ್ಯತ್ಯಾಸಗಳ ಬಗ್ಗೆ ಗಮನ ಹರಿಸಬೇಕಾದ ಅಗತ್ಯವಿದೆ ಇಹ ಜೀವನದಲ್ಲಿ ಸುಖವನ್ನು, ಸುಖದ ಪರಿಕರಗಳನ್ನು ಹೊಂದುವುದು ಐಹಿಕ ಸುಖತತ್ವ, ಶಿಲಾಯುಗ, ಕಬ್ಬಿಣಯುಗ ಮೊದಲಾದ ಹೆಸರುಗಳನ್ನು ನೀಡಿರುವುದನ್ನು ನೋಡಿದರೆ ಏಳಿಗೆಯ ನಿಚ್ಚಣಿಕೆಯ ಮೊದಲಭಾಗದಲ್ಲಿ ಬುಡಕಟ್ಟಿನ ಜೀವನವೂ, ನಾಗರಿಕ ಜೀವನ ಮೇಲುಭಾಗದಲ್ಲಿಯೂ ಇರಬೇಕು ಎನ್ನಿಸುತ್ತದೆ ಪಾರಮಾರ್ಥಿಕತೆಯೆಂದರೆ ಇಹ ವಸ್ತುಗಳ ಪರಿಧಿಗೂ ಮೀರಿದ ವಸ್ತು ವಿಷಯಗಳಿವೆಯೆಂಬ ನಂಬಿಕೆಯ ಒಂದು ಅಂಶ ಮತ್ತು ಆತ್ಮ ಹಾಗೂ ದೈವಗಳ ಬಗ್ಗೆ ತೀವ್ರವಾದ ಕ್ರಿಯಾಶೀಲವಾದ ಚಿಂತನೆ ಇದು ಬುಡಕಟ್ಟುಗಳ ಜೀವನದಲ್ಲಿ ಎಂದೂ ಗುರುತಾಗಿರಲಿಲ್ಲ ಕ್ರೂರ ಕರ್ಮಗಳ ಉಲ್ಲೇಖಗಳನ್ನು ಒಪ್ಪಿಕೊಳ್ಳುವುದರಿಂದ ಆಗಮಗಳು ಇಡಿಯಾಗಿ ಬುಡಕಟ್ಟಿನ ಜೀವನದಿಂದ ಪ್ರಭಾವಿತವಾದವು ಎಂದು ಸೂಚಿಸಿದಂತಾಗದು ಪುರಾಣಗಳಲ್ಲಿ ಕಾಲತರಂಗಿಣಿಗಳಲ್ಲಿ ವಿವರಣೆ ಹೊಂದಿರುವ ನಗರಗಳು ರಾಜ್ಯಗಳು ಮಿಥ್ಯೆಯೆಂದು ತಳ್ಳಿಹಾಕಲು ಬರುವಂತಲ್ಲ ಸಾಮ್ರಾಜ್ಯಗಳು ಉದಿಸಿ ಗುರುತೇ ಉಳಿಯದಂತೆ ನಾಶವಾಗಿ ಹೋದವು ಇವೆಲ್ಲ ಬುಡಕಟ್ಟಿನ ಲಕ್ಷಣ ಹೊಂದಿದ್ದವೇನು? ಋಗ್ವೇದ ಮಂತ್ರಗಳನ್ನು ರಚಿಸಿದ ಋಷಿಗಳನ್ನು ಮಂತ್ರದ್ರಷ್ಟಾರರೆಂದು ವಿದ್ವಾಂಸರು ಹೇಳುವುದನ್ನು ಒಪ್ಪಲಾಗಿದೆ ಒಂದು ಬುಡಕಟ್ಟಿನವರು ಈ ಶಕ್ತಿಯನ್ನು ಪಡೆದಿರಲು ಸಾಧ್ಯವೇ? ಹೀಗಾಗಿ ಬುಡಕಟ್ಟು ಜೀವನದ ಪ್ರಭಾವ ಸ್ವಲ್ಪ ಮಟ್ಟಿಗೆ ಇದ್ದಿತೆಂದು ಒಪ್ಪಬಹುದಾದರೂ (ಸ್ವರಕ್ಷಣೆಯ ವಿಷಯದಲ್ಲಿ) ಬುಡಕಟ್ಟಿನ ಜೀವನದ ಪೂರ್ಣ ಪ್ರಭಾವವನ್ನು ಅಲ್ಲಗಳೆಯಬೇಕಾಗುವುದು ಪಶ್ಚಿಮದ ಸಂಸ್ಕೃತಿಯನ್ನು ಚಿತ್ರಿಸಲು ಪ್ರಕೃತಿ, ಪ್ರಕೃತಿಯತೀತ, ಮಾನವ ಶಾಸ್ತ್ರೀಯತೆ ಮೊದಲಾದ ಪದಗಳನ್ನು ಬಳಸುವುದು ಸೂಕ್ತ ಆದರೆ ಅವುಗಳನ್ನೇ ಪುರಾಣಗಳು ಹೇಳುವಂತಹ ಬ್ರಹ್ಮಸೃಷ್ಟಿಯ ಜಗತ್ತನ್ನು, ಅವನ ಮಾನಸಪುತ್ರರ ಕ್ರಿಯೆಗಳನ್ನು ಒಳಗೊಂಡ ಭಾರತೀಯ ಸಂಸ್ಕೃತಿಯ ವಿವರಣೆಯಲ್ಲಿ ಬಳಸುವುದು ಸರಿಯಲ್ಲ ಇವು ಬುಡಕಟ್ಟಿನ ಸಮೂಹಕ್ಕೆ ಸೇರುವಂತಹವಲ್ಲ

ಆಗಮಗಳ ಬೆಳವಣಿಗೆಯನ್ನು ಎರಡು ಭಾಗವಾಗಿ ವಿಂಗಡಿಸಬಹುದು ಮೊದಲನೆಯದೆಂದರೆ ನೈತಿಕ ಆಧಾರದಲ್ಲಿ ಮಂತ್ರಪೂತವಾದ ನಿತ್ಯ ಕರ್ಮಗಳ ಆಚರಣೆಯಲ್ಲಿ ಪರಮ ಸತ್ಯದ ಬಗ್ಗೆ ಆಳವಾದ ಧ್ಯಾನದಲ್ಲಿ ನಿಯಂತ್ರಿತವಾಗಿ ನಡೆಯುತ್ತಿದ್ದ ನಿತ್ಯ ಜೀವನ ಜನ ಸಂಖ್ಯೆಯ ಬಹುಮಂದಿ ವೇದ ವಿಧಿಗಳ ಅನುಷ್ಠಾನ ಮಾಡಲು ಅವಕಾಶವಿಲ್ಲದ್ದರಿಂದ ವೇದ ಮಂತ್ರಗಳ ಆಧಾರದಲ್ಲಿಯೇ ಬೆಳೆದ ತಾಂತ್ರಿಕ ಪದ್ಧಗಳೊಡನೆ ಸೇರಿದ ತಾಂತ್ರಿಕ ರೀತಿಯ ಮಂತ್ರಗಳನ್ನು ಬೆಳೆಸಲಾಯಿತು ಎರಡನೆಯ ಹಂತದಲ್ಲಿ ದೇವಾಲಯ ನಿರ್ಮಾಣದ ವಿಧಿವಿಧಾನಗಳು ಬೆಳೆದವು ವಿಗ್ರಹಗಳನ್ನು ಮಾಡುವ ವಿವರಣೆಗಳು, ಅವುಗಳ ಪ್ರತಿಷ್ಠಾಪನೆ, ವಿಗ್ರಹಗಳ ನಿತ್ಯ ಹಾಗೂ ವಿಶೇಷ ಆರಾಧನೆಗಳ ಪದ್ಧತಿಗಳು ವ್ಯಕ್ತಿಗತ, ಸಾಮೂಹಿಕ ಉತ್ಸವಗಳ ಆಚರಣೆಗಳ ಹೆಗ್ಗುರುತುಗಳನ್ನು ಹೊಂದಿದ ಕ್ರಮವನ್ನು ಕಾಣಬಹುದು ದೇವಾಲಯಗಳ ಜೀರ್ಣೋದ್ಧಾರ, ಪುನರುದ್ಧರಣಗಳ ಜೊತೆಗೇ ಆರಾಧನೆಯಲ್ಲಿ ನಡೆದ ದೋಷಗಳ ಪರಿಹಾರಕವಾದ ಪವಿತ್ರೀಕರಣಗಳೂ ಬೆಳೆದವು ಮನೆಯಲ್ಲಿ ದೇವರ ಪೂಜೆ ಮಾಡುವುದನ್ನು ವಿಧಿಯಾಗಿಸಲಾಯಿತು ಹೀಗೆ ಆಗಮಗಳ ಧಾರ್ಮಿಕ ಮುಖವನ್ನು ಅಪಧಾರಿಸಲಾಯಿತು ಇಲ್ಲಿನ ಒಂದು ಪ್ರಕಾಶಮಾನವಾದ ಲಕ್ಷಣವೆಂದರೆ ಇಲ್ಲಿನ ಏಕ ದೇವೋಪಾಸನೆ ಎಂದರೆ ಹಲವು ಆಗಮಗಳಲ್ಲಿ ವಿಷ್ಣು ಮಾತ್ರವೇ ಅಥವಾ ಶಿವ ಮಾತ್ರವೇ ಅಥವಾ ಶಕ್ತಿ ಮಾತ್ರವೇ ಪೂಜಾರ್ಹವೆಂದಾದದ್ದು ಇದರಿಂದಾಗಿ ಆಗಮಗಳು ಶೈವ ವೈಷ್ಣವ ಶಕ್ತ್ಯಾಗಮಗಳೆಂದು ಹೆಸರು ಪಡೆಯತೊಡಗಿದವು

ಇಲ್ಲಿ ಆಗಮ ವಿಧಿಗಳ ವಿರುದ್ಧವಾಗಿ ಏಳುವ ಆಕ್ಷೇಪಗಳನ್ನು ಸಂಗ್ರಹವಾಗಿ ಉಲ್ಲೇಖಿಸಬಹುದು

ಅವುಗಳೆಂದರೆ ೧ ವೇದ ಮಂತ್ರಗಳನ್ನು ಅಲ್ಲದೆ ತಾಂತ್ರಿಕ ಮಂತ್ರಗಳನ್ನುಪಯೋಗಿಸಲಾಗಿದೆ ೨ ವೇದಗಳಲ್ಲಿ ವಿಗ್ರಹಾರಾಧನೆಯಿಲ್ಲ ೩ ಸ್ತ್ರೀಯರು ಹಾಗೂ ಬ್ರಾಹ್ಮಣೇತರರು ದೀಕ್ಷೆ ಪಡೆಸಬಹುದಾಗಿದೆ ಒಟ್ಟಿನಲ್ಲಿ ಜನತೆಯ ಆರಾಧನೆಯ ಅಪೇಕ್ಷೆಯನ್ನು ಪೂರ್ಣಗೊಳಿಸಬೇಕು ಎನ್ನಬಹುದು ಜನತೆಯ ಬಹುಸಂಖ್ಯೆ ವೇದಗಳನ್ನು ಅಧ್ಯಯನ ಮಾಡಲಾಗದು ಆದ್ದರಿಂದ ತಾತ್ರಿಕ ಮಂತ್ರಗಳನ್ನು ಬೆಳೆಯಿಸಲಾಯಿತು ಮಂತ್ರಗಳಲ್ಲಿ ದೈವದ ಇರುವಿಕೆಯನ್ನು ಬಹುಮಂದಿ ಕಾಣಲಾರರು, ಅವರಿಗಾಗಿ ದೈವದ ಸ್ಪಷ್ಟ ಖಚಿತ ಬಾಳಿಕೆ ಬರುವ ರೂಪವನ್ನು ನೀಡಬೇಕು ವಿಗ್ರಹದಲ್ಲಿ ದೈವದ ಇರುವಿಕೆ ದೇವರ ಸರ್ವವ್ಯಾಪಕತೆ, ಸರ್ವಾಂತರ್ಯಾಮಿತ್ವಗಳಿಂದಾಗಿ ಸೂಕ್ತವಾಗಿದೆ ಅವುಗಳನ್ನು ಪ್ರತಿಷ್ಠಾಪಿಸುವುದರ ಮೂಲಕ ಸನ್ನಿಧಾನವನ್ನು ಅನುಭವಿಸಬಹುದು ಇದನ್ನು ಒಪ್ಪದಿದ್ದಲ್ಲಿ ದೈವದ ಸರ್ವಾಂತರ್ಯಾಮಿತ್ವವನ್ನು ಪ್ರಶ್ನಿಸಿದಂತೆಯೇ ಆಗುವುದು ವೇದಗಳನ್ನು ಅಧ್ಯಯನ ಮಾಡಲಾಗದವರು ಅಪೇಕ್ಷಿತರ ಆಸೆ ಆಕಾಂಕ್ಷೆಗಳ ವಿಭಿನ್ನತೆಗೆ ಅನುಗುಣವಾಗಿ ದೀಕ್ಷೆಯನ್ನು ಪಡೆಯಲು ಅವಕಾಶ ನೀಡಲಾಯಿತು ಹೀಗಾಗಿ ಹೈಂದವ ಸಂಸ್ಕೃತಿಯ ಧಾರ್ಮಿಕ ಪ್ರತೀಕಗಳಾದ ಆಗಮಗಳ ಉದಾರತೆಯನ್ನು ಗುರು



# ಶಾಸ್ತ್ರಾಧ್ಯಯನದ ರೀತಿ ನೀತಿ

ಪ್ರೊ ಪಿ ಶ್ರೀರಾಮಮೂರ್ತಿ ವಾಲ್ಟೈರ್

ಶಾಸ್ತ್ರಗಳನ್ನು - ಪ್ರಮುಖವಾಗಿ ನ್ಯಾಯ, ಮೀಮಾಂಸೆ, ಸಾಂಖ್ಯ ಹಾಗೂ ಯೋಗ ಶಾಸ್ತ್ರಗಳನ್ನು - ಪ್ರಧಾನವಾಗಿ ಗುರುಕುಲಗಳಲ್ಲಿಯೂ ಆಗಾಗ ವಿಶ್ವವಿದ್ಯಾಲಯಗಳಲ್ಲಿಯೂ ಅಧ್ಯಯನ ಮಾಡಲಾಗುತ್ತಿದೆ ಪೀಠಾಧಿಪತಿಗಳ, ತಿ ತಿ ದೇ ಗಳ ಮತ್ತಿತರ ಹಲವು ದತ್ತಿಸಂಸ್ಥೆಗಳ ಪ್ರೋತ್ಸಾಹದಿಂದಾಗಿ, ಪ್ರೌಢ ಪ್ರಬಂಧಗಳೂ ಅಪರೂಪಕ್ಕೆ ಜ್ಞಾನವೃದ್ಧರ ಬಳಿ ಕುಳಿತ ಯುವ ವಿದ್ವಾಂಸರ ಅಧ್ಯಯನಕ್ಕೆ ಒಳಗಾಗುತ್ತಿವೆ ಸಂಸ್ಕೃತ ವಿದ್ಯಾಪೀಠಗಳಲ್ಲಿ ಹೊಸ ಹೊಸದಾಗಿ ಸಂಪಾದನೆ ಹೊಂದಿ ಪ್ರಕಟವಾಗಿರುವ ಪ್ರಾಚೀನ ಪದ್ಯ, ಭಾಷ್ಯ, ಪ್ರೌಢ ಪ್ರಬಂಧಗಳ ಅಧ್ಯಯನ ನಡೆಯುತ್ತಿದೆ ಆಗಾಗ ಸಂಸ್ಕೃತ ಆಂಗ್ಲ ಭಾಷೆಗಳಲ್ಲಿ ರಚನೆಯಾದ ಡಾಕ್ಟರೇಟ್ ಪ್ರಬಂಧಗಳಲ್ಲಿ ಹಲವಾರು ವಿಷಯಗಳು ಚರ್ಚೆಗೆ ಒಳಗಾಗುತ್ತಿವೆ ಅಲ್ಲೊಮ್ಮೆ ಇಲ್ಲೊಮ್ಮೆ ಪ್ರಾಚೀನ ಪದ್ಧಗಳಲ್ಲೂ ಆಧುನಿಕ ತತ್ವಶಾಸ್ತ್ರದಲ್ಲೂ ನಿಷ್ಣಾತರಾದ ವಿದ್ವಾಂಸರು ಪಾಶ್ಚಾತ್ಯ ಚಿಂತನದ ಬೆಳಕಿನಲ್ಲಿ ಅವುಗಳನ್ನು ಅರ್ಥೈಸಲು ಪ್ರಯತ್ನ ಪಡುತ್ತಿರುವುದನ್ನೂ ಕಾಣುತ್ತೇವೆ

ಮೊದಲನೆಯದಾಗಿ ಆಧುನಿಕ ಮಾನವನಿಗೆ ಈ ಶಾಸ್ತ್ರಗಳು ಎಷ್ಟರ ಮಟ್ಟಿಗೆ ಅಪೇಕ್ಷ್ಯ ಎಂಬುದನ್ನು ತಿಳಿದು ಅಗತ್ಯವಾದ ರೀತಿಯಲ್ಲಿ ಅಪೇಕ್ಷೆಗೆ ತಕ್ಕಂತೆ ರೂಪಿಸಿಕೊಳ್ಳುವಲ್ಲಿನ ಸಾಧಕ ಬಾಧಕಗಳನ್ನು ವಿಚಾರಿಸಬೇಕು ಅವಧಾರಿಸಿ ಹೇಳಬೇಕಾದ ಒಂದು ಪ್ರಮುಖ ಅಂಶವೆಂದರೆ ನಮ್ಮ ಎಲ್ಲ ಶಾಸ್ತ್ರಗಳೂ ಜೀವನದೊಡನೆ - ಜೀವನದ ಗೊತ್ತು ಗುರಿಗಳೊಡನೆ ಬಹು ನಿಕಟ ಸಂಬಂಧ ಹೊಂದಿದ್ದು, ಜಾಗತಿಕ ಒಳಿತನ್ನು - ಇಹದಲ್ಲಿನ - ಪರದಲ್ಲಿನದ್ದೂ ಕೂಡ - ದೊರಕಿಸಿಕೊಳ್ಳಲು ಬೆಂಬಲವಾಗಿವೆ - ಇಲ್ಲೂ ಅಲ್ಲೂ ಸಲ್ಲುವಂತಾಗಲು ಸಾಧಕವಾಗಿವೆ

ನ್ಯಾಯ ವೈಶೇಷಿಕಗಳು ಭೌತಿಕ ಅಧಿ ಭೌತಿಕ ಬಗೆಗಳನ್ನು ವಿವರಿಸಲು ಪ್ರಯತ್ನ ಪಟ್ಟಂತೆಯೇ ಅವುಗಳನ್ನು ಪ್ರಾಥಮಿಕವಾಗಿ ತಿಳಿಯಲು ಪ್ರಯತ್ನಿಸಿದವು ನಂತರದ ಕಾಲದಲ್ಲಿ ನವ್ಯನ್ಯಾಯವು ಪದರೆಗೊಂಡು ಸೇರಿಹೋದ ಹಾಗೂ ಅಪೂರ್ಣವಾದ ಪರಿಕಲ್ಪನೆಗಳ ಬಗ್ಗೆ ಖಚಿತತೆ ಸ್ಪಷ್ಟತೆಗಳನ್ನು ಪಡೆದಿತು ವೇದಗಳು ಹಾಗೂ ವೇದಾಂತ ಗ್ರಂಥಗಳ ಉದ್ದೇಶದ ಬಳಿ ಸೇರುವಂತೆ ಪದ್ಯ ವಿವರಣಾತಂತ್ರವನ್ನು ಮೀಮಾಂಸೆಯು ಬೆಳೆಸಿದೆ ಶಾಸ್ತ್ರ ಹಾಗೂ ಸಾಹಿತ್ಯಗಳಲ್ಲಿ ತಾತ್ಪರ್ಯನಿರ್ಣಯಕಗಳು ಹಾಗೂ ಆರು ಶ್ರುತಿ ಪ್ರಮಾಣಗಳು ತೀವ್ರ ಮತ್ತು ವಿಶಾಲವಾದ ಪ್ರಯೋಗಗಳಾಗಿವೆ ಇತರ ಧರ್ಮಗಳ, ಸಂಸ್ಕೃತಿಗಳ ಉದ್ಧ ಕೃತಿಗಳ ಉದ್ದೇಶ ನಿರ್ಣಯದಲ್ಲುಂಟಾಗಿರುವ ಉತ್ಪ್ರೇಕ್ಷಾಯುತ ಸೂತ್ರಗಳೊಡನೆ ಲಾಭದಾಯಕವಾಗಿ ಇವುಗಳನ್ನು ಹೋಲಿಸಬಹುದು

ಹೀಗೆಯೇ ಸಾಂಖ್ಯ ಮಹಾಕಾವ್ಯ ಗೀತಾ ಸಾಂಖ್ಯ, ಸಾಂಖ್ಯ ತತ್ವಗಳು ಆಧುನಿಕ ಕಾಲದ ಜೀವನದ ಬಗೆಗಿನ ಪವಿತ್ರ ಹಾಗೂ ಸಮಗ್ರ ದರ್ಶನದ ಅಗತ್ಯವನ್ನು ತಿಳಿಸುವುವು ಎಲ್ಲ ಶಿಸ್ತುಗಳನ್ನೂ ಜೀವನದಲ್ಲಿ ಅವುಗಳ ಪ್ರಯೋಜನ, ವಿಶ್ವದ ಒಳಿತಿನಲ್ಲಿ ಅವುಗಳ ಸ್ಥಾನಗಳಿಗೆ ತಕ್ಕಂತೆ, ಅವಧಾರಣೆ ಮಾಡಿ ಆಚರಣೆಗೆ ತರಬೇಕು ಈ ಸಂದರ್ಭದಲ್ಲಿ ಈ ಅಧ್ಯಯನಗಳ ಭಾರತೀಯ ಪರಂಪರೆ ಹೆಚ್ಚು ಸಾಪೇಕ್ಷವಾಗುತ್ತದೆ ಮತ್ತು ವೇದಾಂತದ ಮೇಲೆ ಅವು ಬೀರಿದ ಪರಿಣಾಮದಿಂದ ಸಾಂಖ್ಯ ತತ್ವ ಮುಖ್ಯವಾಗುತ್ತದೆ ಬುದ್ಧಿಯ ವಿವಿಧ ಪ್ರಜ್ಞಾಸ್ತರಗಳು ಹಾಗೂ ಅವುಗಳ ಕ್ರಿಯೆಗಳಲ್ಲಿ ದೃಢವಾದ ಪರಿಕಲ್ಪನೆಗಳನ್ನು ಹೊಂದಲು ನಡೆಸುವ ತಮ್ಮ ಸಂಶೋಧನೆಗಳಲ್ಲಿ ಈ ರೀತಿಯವುಗಳನ್ನು ಮನಃಶಾಸ್ತ್ರಜ್ಞರು, ಪರಾ - ಮನೋವಿಜ್ಞಾನಿಗಳು ಅಂಗೀಕರಿಸುತ್ತಿದ್ದಾರೆ ಹಾಗೆಯೇ ದೈಹಿಕ ಬೌದ್ಧಿಕ ರೋಗಗಳ ಚಿಕಿತ್ಸೆಯಲ್ಲಿ ಸೃಜನಾತ್ಮಕ ಮೌಲ್ಯಹೊಂದಿದ ಯೋಗ ತಂತ್ರಗಳನ್ನೂ ಅಭ್ಯಾಸ ಮಾಡಲಾಗುತ್ತಿದೆ ಬೌದ್ಧ, ಜೈನ, ತಾಂತ್ರಿಕರ ಧಾರ್ಮಿಕ ಪರಂಪರೆಯಲ್ಲಿ ಬಂದಿರುವ ತಂತ್ರಗಾರಿಕೆಯೊಡನೆ ಇಲ್ಲಿನ ಯೋಗ ತಂತ್ರವನ್ನು ಯಶಸ್ವಿಯಾಗಿ ಹೋಲಿಸಬಹುದು ಈ ರೀತಿಯಲ್ಲಿ ಶಾಸ್ತ್ರಗಳ ಬೆಳವಣಿಗೆಯ ವ್ಯಾಪ್ತಿಹಿರಿದಾಗಿ ಅಧ್ಯಯನ ಸಾಪೇಕ್ಷವಾಗುತ್ತದೆ

ಈ ಗುರಿಯನ್ನು ಸಾಧಿಸಲು ನಾವು ಮಾರ್ಗ ಮಾಧ್ಯಮಗಳನ್ನು ಕಂಡುಕೊಳ್ಳಬೇಕಿದೆ ಅಪರೂಪದ ಹಾಗೂ ಅತ್ಯುನ್ನತವಾದ ಗ್ರಂಥಗಳನ್ನು ಬೋಧಿಸಲು ದೇಶಾದ್ಯಂತ ಹರಡಿಹೋಗಿರುವ ಮಹಾ ವಿದ್ವಾಂಸರನ್ನು ಗುರುತಿಸಿ, ಕಾಲದಿಂದ ಕಾಲಕ್ಕೆ ಅವರ ಬಳಿಗೆ ಕಳಿಹಿಸಲಾಗುವ ಯುವ ವಿದ್ವಾಂಸರಿಗೆ ಶಿಕ್ಷಣ ನೀಡಲು ಒಪ್ಪಿಸಬೇಕು ಎರಡನೆಯದಾಗಿ ವಿದ್ವತ್ ಗೋಷ್ಠಿಗಳನ್ನೂ ಶಾಸ್ತ್ರಾರ್ಥ ಸಭೆಗಳನ್ನೂ ಸಂಯೋಜಿಸಿ, ಆಸಕ್ತ ಹಾಗೂ ಸಾಪೇಕ್ಷ ವಿಷಯಗಳ ಬಗ್ಗೆ ಚರ್ಚೆ ವಿಚಾರಗಳನ್ನು ನಡೆಸಿ ಅವುಗಳ ಫಲಸ್ವರೂಪವನ್ನು ದಾಖಲಿಸಬೇಕು ಇದು ಆಯಾ ಕ್ಷೇತ್ರದಲ್ಲಿ ಪರಿಶೋಧನೆ, ವಿಭಾಗೀಕರಣಗಳಿಗೆ ಕಾರಣವಾಗುವಂತಿರಬೇಕು ಪ್ರಾಮಾಣಿಕವಾದ ಶಾಸ್ತ್ರಗ್ರಂಥಗಳನ್ನು ಭಾಷ್ಯ, ಟಿಪ್ಪಣಿಗಳೊಡನೆ ಮುದ್ರಿಸಿ ಪ್ರಕಟಿಸುವ ಒಂದು ಯಂತ್ರಾಂಗ ಉಂಟಾಗಬೇಕು ಕಡೆಯದಾಗಿ ಈ ಪ್ರಯತ್ನಗಳೆಲ್ಲ ಶಾಸ್ತ್ರಾಭಿವೃದ್ಧಿಗಾಗಿ ಅರ್ಪಿತವಾದ ನಿಯತಕಾಲಿಕಗಳಲ್ಲಿ ದಾಖಲಾತಿ ಪಡೆಯಬೇಕು ಇದರಿಂದಾಗಿ ನಮ್ಮ ಪ್ರಯತ್ನಗಳೆಲ್ಲ ಒಮ್ಮುಖತೆ ಪಡೆಯಲು ನೆರವಾಗುವುದು

ಈಚೆಗೆ ಭಾರತೀಯ ತತ್ವ ಶಾಸ್ತ್ರಗಳಲ್ಲಿ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ ಹಲವಾರು ಬೌದ್ಧ, ಜೈನ, ತಂತ್ರ ಕೃತಿಗಳು ಬೆಳಕಿಗೆ ಬಂದಿವೆ ಈ ಕೃತಿಗಳ ವಿದ್ವಾಂಸರೊಂದಿಗೆ ಪರಂಪರೆಯ ಶಾಸ್ತ್ರ ವಿದ್ವಾಂಸರು ಬೆರೆತು ವಿಚಾರ ವಿನಿಮಯ ಮಾಡಿಕೊಳ್ಳುವತ್ತಲೂ ನಾವು ಗಮನ ಹರಿಸಬೇಕಾದ ಅಗತ್ಯವಿದೆ ಜೊತೆಗೇ ಭಾರತದಲ್ಲಿ ಬಹು ದೀರ್ಘಕಾಲ ವೇದ ಹಾಗೂ ವೇದಾಂತ ಸಿದ್ಧಾಂತಗಳು ಬೆಳೆದು ಬಂದು ಪ್ರಸಿದ್ಧವಾದ ಪುರಾಣ ಪರಂಪರೆಯಲ್ಲಿ ಬೆರೆತು ಧಾರ್ಮಿಕ ರೂಪ ಪಡೆದು ಆಗಮಿಕ ಹಾಗೂ ತಾಂತ್ರಿಕ ಪರಂಪರೆಯಲ್ಲಿ ಸೇರಿ ಹೋಗಿವೆ ಈ ಎಲ್ಲ ಪರಂಪರೆಗಳೂ ವೈದಿಕ ಪರಂಪರೆಯೊಡನೆ ಹೇಗೆ ಬೆರೆಯಿತು ಮತ್ತು ಯಾವರೀತಿಯಲ್ಲಿ ಸಾಂಪ್ರದಾಯಿಕ ಜಾನಪದ ಪಂಥಗಳ ಉನ್ನತಿಗೆ ಕಾರಣವಾಗಿ ಧಾರ್ಮಿಕ, ಅನುಷ್ಠಾನಗಳ ರೂಪ ಪಡೆದಿವೆ ಎಂಬುವುಗಳನ್ನು ನಾವು ಭಾರತೀಯರೂ, ಶಾಸ್ತ್ರದರ್ಶನ ವಿದ್ವಾಂಸರೂ ಬಗೆಹರಿಸಬೇಕಾಗಿದೆ ಈಗ ಪಾಶ್ಚಾತ್ಯ ಆಧುನಿಕ ವಿದ್ವಾಂಸರಿಂದ ಅಲ್ಪ ಸ್ವಲ್ಪ ಉಪಕರಣಗಳೊಂದಿಗೆ ಶಾಸ್ತ್ರಗಳ ಅಧ್ಯಯನ ನಡೆಯುತ್ತದೆ ಈ ಕ್ಷೇತ್ರವನ್ನು ಹೀಗೆಯೇ ಅರೆ ಕೊರೆಯಾಗಿ ಬಿಡದೆ ಅರ್ಹ ವಿದ್ವಾಂಸರ ಕೈಗೆ ಒಪ್ಪಿಸಬೇಕು ಇಲ್ಲಿ ತಿ ತಿ ದೇವಸ್ಥಾನಗಳು ನಿಜವಾಗಿಯೂ ಹೊಸ ಕ್ಷೇತ್ರ ಪ್ರವೇಶ ಮಾಡಬಹುದು *

# ವೇದಗಳ ಸಂರಕ್ಷಣೆ, ಪ್ರಚಾರ

–ಪ್ರೊ|| ರಾಮಮೂರ್ತಿ ಶರ್ಮ ಚಂದೀಗಢ

ಆರ್ಯರ ಅತಿ ಪ್ರಾಚೀನ ಇತಿಹಾಸವನ್ನು, ಪುರಾಣವನ್ನು, ಧರ್ಮ, ತತ್ವ, ಸಂಗೀತ, ಸಾಂಸ್ಕೃತಿಕ ಪರಂಪರೆ, ವೈದ್ಯ ವಿಜ್ಞಾನ, ವಿಜ್ಞಾನ, ಭಾಷಾವಿಜ್ಞಾನಗಳ ಪರಿಚಯ ಪಡೆಯಬೇಕೆಂಬ ಆಸಕ್ತಿ ಯಾರಿಗಾದರೂ ಇದ್ದರೆ, ಈ ಎಲ್ಲವನ್ನೂ ಒಂದೇ ಕಡೆ ತಿಳಿಯಬಹುದಾದ ಒಂದು ಪಠ್ಯವಿದೆ – ಅದೇ ವೇದ ಹೀಗೆ ಪ್ರಾಚೀನತೆ, ಪರಿಶುದ್ಧತೆ, ಪ್ರಾಗೈತಿಹಾಸಿಕತೆಗಳಲ್ಲಿ ವೇದಗಳಿಗೆ ಸಮಾನಾಂತರವಾದ – ಅದರಲ್ಲೂ ಋಗ್ವೇದಕ್ಕೆ ಸಮಾನಾಂತರವಾದ ಇನ್ನೊಂದು ಇಲ್ಲ ಆರ್ಯರ ಅದರಲ್ಲೂ ಇಂಡೊ ಜರ್ಮನಿಕ್ ಕುಟುಂಬದ ಇತಿಹಾಸದ ಅತಿ ಪ್ರಾಚೀನ ಪರಂಪರೆ ಋಗ್ವೇದವಾಗಿದೆ ಅತಿ ಪ್ರಾಚೀನ ಇರಾನಿಯನ್ ಸಮೂಹಕ್ಕೆ ಸಂಬಂಧಿಸಿದಂತೆ – ಇದು ಕ್ರಿ ಪೂ ಐದನೇ ಶತಮಾನದ್ದು – ಅವೆಸ್ತವು ಅನೇಕ ಪ್ರಕ್ಷಿಪ್ತಗಳನ್ನೊಳಗೊಂಡು ಓದುಗರಿಗೆ ಅರ್ಥೈಸಿಕೊಳ್ಳಲು ಕಷ್ಟಸಾಧ್ಯವಾದ ದೋಷಪೂರ್ಣ ವರ್ಣಗಳನ್ನು ಹೊಂದಿದೆ ಗ್ರೀಕರ ಆರಂಭದ ಚರಿತ್ರೆಯೂ ಅಷ್ಟೆ, ಹೋಮರನ ಕಾವ್ಯ ಋಗ್ವೇದಕ್ಕಿಂತ ಈಚಿನದು ಲ್ಯಾಟಿನ್ ಸಹ (ಕ್ರಿ ಪೂ 200) ಋಗ್ವೇದಕ್ಕಿಂತ 1200 ವರ್ಷಗಳಷ್ಟು ಈಚಿನದು ಋಗ್ವೇದದ ಪ್ರಾಚೀನತೆ ಮತ್ತು ಹಳಮೆಯನ್ನು ಒತ್ತಿಹೇಳಲು ಇಷ್ಟು ಸಾಕು ಎನ್ನಿಸುತ್ತದೆ

ವೇದಗಳ ವೈವಿಧ್ಯಮಯ ಅಧ್ಯಯನದ ಬಗ್ಗೆ ಭಾರತೀಯ ಪಂಡಿತರು ಲಕ್ಷ್ಯ ಕೊಡಲಿಲ್ಲವೆಂಬುದು ಆಶ್ಚರ್ಯದ ಸಂಗತಿ ಭಾರತೀಯ ವೈದಿಕ ವಿದ್ವಾಂಸರು ಈಚೆಗಷ್ಟೇ ವಿವಿಧ ದೃಷ್ಟಿಕೋನಗಳ ಬಗ್ಗೆ ವೈದಿಕ ದೃಷ್ಟಿಯತ್ತ ಬೆಳಕು ಹರಿಸುತ್ತಿದ್ದಾರೆ ಯೂರೋಪಿನ ವಿದ್ವಾಂಸರು ವಿಶೇಷವಾಗಿ ಜರ್ಮನ್ ವಿದ್ವಾಂಸರು ತಮ್ಮದೇ ಆದ ಕ್ರಮ ಹಾಗೂ ತಿಳುವಳಿಕೆಯಿಂದ ವೇದಗಳನ್ನು ಅಭ್ಯಾಸ ಮಾಡಿ ಅರ್ಥವಿಸಿದರೆಂಬುದರಲ್ಲಿ ಉತ್ಪ್ರೇಕ್ಷೆಯೇನಿಲ್ಲ ಈ ನಿಟ್ಟಿನಲ್ಲಿ ಕೆಲಸಮಾಡಿದ ಜರ್ಮನ್ ವಿದ್ವಾಂಸರ ಪಟ್ಟಿದೊಡ್ಡದು ವಿಶೇಷವಾಗಿ ಬಾರ್ತಲೋಂ ಆಸ್ಸೀ (1682–1719) ಯಿಂದ ಪೌಲ್ ಮತ್ತಿತರ ಈ ಶತಮಾನದ ವರೆಗಿನ ಜರ್ಮನ್ ವಿದ್ವಾಂಸರು ವೇದ ಸಾಹಿತ್ಯದ ಅತ್ಯುತ್ತಮ ವಿದ್ಯಾರ್ಥಿಗಳೂ, ವಿದ್ವಾಂಸರೂ ಆಗಿದ್ದಾರೆ ಆದರೆ ಪರಿಶೋಧನೆ ಹಾಗೂ ವಿಶೇಷ ತಜ್ಞತೆಯ ಈ ಶತಮಾನದಲ್ಲಿ ವೈದಿಕ ಅಧ್ಯಯನಕ್ಕಾಗಿ ನಾವು ಅವರ ಹಾಗೂ ಇತರ ಪಾಶ್ಚಿಮಾತ್ಯ ವಿದ್ವಾಂಸರನ್ನು ಅವಲಂಬಿಸಬೇಕೆ ? ಇಲ್ಲ ವೇದಗಳ ರೂಪದಲ್ಲಿರುವ ನಮ್ಮ ಋಷಿಗಳ ದರ್ಶನವನ್ನು ಇಂದು ಅಧ್ಯಯನ ಮಾಡಬೇಕಾದ್ದು ನಮ್ಮ ಆದ್ಯ ಕರ್ತವ್ಯವಾಗಿದೆ ಈ ಬಗ್ಗೆ ಸುಕಥನಕರರು ಬಹುಸೂಕ್ತವಾಗಿ ಮಾತನಾಡುತ್ತಾರೆ

“ಜೊತೆಗೇ ನಮ್ಮ ಪ್ರಾಚೀನತೆಯನ್ನು, ಸಾಹಿತ್ಯವನ್ನು ಅರ್ಥೈಸುವ ಹೊರೆಯನ್ನು ಯೂರೋಪಿಯನ್ ವಿದ್ವಾಂಸರ ಹೆಗಲಿಗೆ ಏರಿಸುವುದು ಅನುಚಿತವಾಗುತ್ತದೆ ನಮ್ಮ ಹೊರೆಯನ್ನು ನಾವೇ ಹೊರುವಷ್ಟು ಶಕ್ತರಾಗಬೇಕು ಇದಕ್ಕಾಗಿ ಆಧುನಿಕ ಶಬ್ದಶಾಸ್ತ್ರದ ಇತಿಹಾಸದ ಪರಿಶೋಧನೆಯ ಎಲ್ಲ ಪರಿಕರಗಳನ್ನು ಹೊಂದಿಸಿಕೊಳ್ಳಬೇಕು”

ಮೇಲಿನ ಮಾತುಗಳ ಅಂತರ್ಯವನ್ನು ಗ್ರಹಿಸಿದ ತಿ ತಿ ದೇ ವೇದಗಳ ಅಧ್ಯಯನ, ಸಂರಕ್ಷಣೆ, ಪ್ರಚಾರಗಳಿಗಾಗಿ ಹೊಣೆಯರಿತು ಪ್ರಯತ್ನಿಸುತ್ತಿದೆ, ಒಂದು ವಿಧದಲ್ಲಿ ಶ್ರೀ ಹರ್ಷನ ನೈಷಧ ಚರಿತಂನ ಅಧಿತಿ ಬೋಧಾಚರಣ ಪ್ರಚಾರಣೈ, –ಎಂಬಂತೆ

ವೈದಿಕ ಅಧ್ಯಯನದ ಒಂದು ಭಾಗವೇ ವೇದಗಳ ಸಂರಕ್ಷಣೆ ಸಂರಕ್ಷಣೆ ಎಂದರೆ ವೇದಗಳು ಕಳ್ಳತನವಾಗಿಬಿಡುತ್ತವೆ ಎಂಬರ್ಥದಲ್ಲಿ ರಕ್ಷಣೆಯನ್ನು ಬಯಸುತ್ತವೆ ಎಂದಲ್ಲ ಸಂರಕ್ಷಣೆಯೆಂದಾಗ ವೇದಗಳ ಪಠ್ಯಭಾಗ ಹಾಗೂ ಅವುಗಳ ವಿವರಣೆಗಳನ್ನು ತಪ್ಪಾಗಿ ಅರ್ಥೈಸುವಿಕೆ, ಭ್ರಷ್ಟ ಪಾಠೀಕರಣ, ಹಾಗೂ ಪ್ರಕ್ಷೇಪಗಳಾಗದಂತೆ ಕಾಪಾಡುವಿಕೆ ಎಂದು ತಿಳಿಯಬೇಕು ಇದಕ್ಕಾಗಿ ಅತ್ಯುನ್ನತ ಸ್ಥಾಯಿಯ ಪಠ್ಯವಿರುವಂತಹ ವೇದಗಳನ್ನು ಸಾಧ್ಯವಾದಷ್ಟು ಭಾಷೆಗಳಲ್ಲಿ ಅನುವಾದ ಮಾಡಿ ಹೊರತರಬೇಕು ಕಾರಣ ವೇದಗಳ ಓದುಗನಿಗೆ ಭಾಷೆಯೆನ್ನುವುದು ತೊಡಕಾಗಬಾರದು ಹಾಗೂ ಪ್ರತಿಯೊಬ್ಬ ಪ್ರತಿಭಾವಂತನೂ ಸ್ವತಂತ್ರವಾಗಿ ವೇದಗಳ ಅಧ್ಯಯನ ಮಾಡುವಂತಾಗಬೇಕು ಈ ಹಿರಿಯ ಕೆಲಸವನ್ನು ದೆಹಲಿಯ ವೈದಿಕ ಪ್ರತಿಷ್ಠಾನ ಹಾಗೂ ತಿ ತಿ ದೇವಸ್ಥಾನಗಳಂತಹ ಸಂಸ್ಥೆಗಳು ಕೈಗೆತ್ತಿಕೊಳ್ಳಬೇಕು ಪ್ರಾಂತೀಯ ಭಾಷೆಗಳಲ್ಲಿ ವೇದ ಪಠ್ಯಗಳ ಅನುವಾದ ಹಾಗೂ ವಿವರಣೆಗಳನ್ನು ನೀಡುವ ಕೆಲಸವನ್ನು ಆಯಾ ಪ್ರಾಂತೀಯ ವಿದ್ವಾಂಸರಿಗೆ ಒಪ್ಪಿಸುವ ಮೂಲಕ ಪ್ರಾಂತೀಯ ಸರಕಾರಗಳೂ ಮಾಡಬಹುದು ಇದರಿಂದಾಗಿ ವೇದಗಳು ಸಂಸ್ಕೃತ, ಆಂಗ್ಲ ಭಾಷೆಗಳನ್ನರಿಯದವರೂ ತಿಳಿಯುವಂತೆ ಆಗುತ್ತದೆ ಭಾರತದ ಸರಕಾರವೂ ವೇದಗಳ ಮೂಲ ಕೃತಿಗಳು ಹಾಗೂ ಅವುಗಳ ಸಂಪಾದಿತ ಕೃತಿಗಳ ಪ್ರಕಟನೆಯಲ್ಲಿ ಆರ್ಥಿಕ ನೆರವು ನೀಡಬೇಕು ಈಗ ಈ ಸಭೆ ತಿ ತಿ ದೇಗಳು ವೇದಗಳ ಸಂರಕ್ಷಣೆಯಲ್ಲಿ ಕೈಗೊಂಡಿರುವ ಹಲವಾರು ಕಾರ್ಯಕ್ರಮಗಳನ್ನು ಶ್ಲಾಘಿಸುವುದರಲ್ಲಿ ನನ್ನೊಡನೆ ಸೇರುವುದೆಂದು ಭಾವಿಸುತ್ತೇನೆ ಪಂಜಾಬ್ ವಿಶ್ವವಿದ್ಯಾಲಯವೂ ವೇದ ಸಂರಕ್ಷಣೆಯ ಕಾರ್ಯದಲ್ಲಿ ಗಂಭೀರವಾಗಿಯೂ, ವಿಶೇಷವಾಗಿ 'ವೈದಿಕ ಪದಾನುಕ್ರಮಣಕೋಶ ರಚನೆ, ಮತ್ತಿತರ ವೇದಗಳ ಪ್ರಕಟನ ಯೋಜನೆಗಳಲ್ಲಿ ತೀವ್ರವಾಗಿ ತೊಡಗಿದೆ

ಸಾಯಣ ಅರವಿಂದ ಮೊದಲಾದವರು ಹಾಗೂ ಮೆಕ್‌ಡೊನೆಲ್ ಮತ್ತು ಪೀಟರ್‌ಸನ್ ಮೊದಲಾದವರ ಭಾಷ್ಯಗಳ ಬಗ್ಗೆ ವಿಮರ್ಶಾತ್ಮಕ ದೃಷ್ಟಿ ಹೊಂದಿದ ಸೂಕ್ತ ವಿವರಣೆಯನ್ನೊಳಗೊಂಡ ವೇದಗಳ ಒಂದು ಆವೃತ್ತಿಯನ್ನು ತಯಾರಿಸುವ ಅನಿವಾರ್ಯ ಅಗತ್ಯ ವೇದ ಸಂರಕ್ಷಣೆಯಲ್ಲಿ ಕಂಡುಬರುತ್ತದೆ ಮನುಷ್ಯನ ಅಮೂಲ್ಯ ಭಂಡಾರ, ವಿಶೇಷವಾಗಿ ಭಾರತೀಯರ ಅಮೂಲ್ಯ ಭಂಡಾರವಾದ ವೇದಗಳ ಸರಿರೂಪದ ರಕ್ಷಣೆ ಇಂತಹ ಕಾರ್ಯದಿಂದ ನೆರವೇರಿದಂತೆ ಆಗುತ್ತದೆ ವೇದ ಪಾಠವನ್ನು ಸಂರಕ್ಷಿಸಿ ಮುಂದಿನ ತಲೆಮಾರುಗಳಿಗೆ ಈ ಪರಂಪರೆಯನ್ನು ತಲುಪಿಸಲು ವೇದಪಾಠದ ವಿವಿಧ ರೀತಿಗಳನ್ನು – ಘನಪಾಠ, ಜಟಾಪಾಠ – ಬೋಧಿಸುವ ವೇದಪಾಠಿಗಳನ್ನು ಸರ್ಕಾರ ನೇಮಕ ಮಾಡಬೇಕು ಹೊಸದಾಗಿ ಉಂಟಾಗಿರುವ ವೇದ ವೇದಾಂತ ಸಂಸ್ಥೆಗಳು – ಮದರಾಸಿನ ವೇದವೇದಾಂತ ಸಂಸ್ಕೃತ ವಿಶ್ವವಿದ್ಯಾಲಯ, ಕೇರಳದ ಆದಿಶಂಕರ ವಿಶ್ವವಿದ್ಯಾಲಯಗಳಂತಹವು ಮೇಲೆ ತಿಳಿಸಿದ ರೀತಿಯಲ್ಲಿ ವೇದ ಪರಿರಕ್ಷಣೆ ಮಾಡಬೇಕು

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಎಂ ವಿ ಎಸ್ ಪ್ರಸಾದ್, ಐ ಎ ಎಸ್,
ಕಾರ್ಯನಿರ್ವಹಣಾಧಿಕಾರಿ

ಪ್ರಿಯ ಭಕ್ತ ಬಂಧುಗಳೆ,

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ, ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ ಆಹಾರವನ್ನು ನೀಡಿವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ ೧೯೮೫ ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ಪಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ಪಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ ತಿ ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ ತಾವು ರೂ ೧೦೦೦೦:- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು, ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ ತಿ ದೇ ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ

ದೂರದೂರಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ ಹಾಗಾಗಿ ಅನ್ನದಾನ ಮಾಡಬೇಕು

-ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ ತಮ್ಮ ವಿಶ್ವಾಸಿ,
(ಎಂ ವಿ ಎಸ್ ಪ್ರಸಾದ್)

ವೇದಗಳ ಪ್ರಚಾರಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಇವುಗಳ ಮೂಲಕವಾಗಿಯೇ ವೇದಗಳ ಪ್ರಾಚೀನ ಹಾಗೂ ಅಮೂಲ್ಯ ಭಂಡಾರದ ಬಗ್ಗೆ ತಿಳಿದು ಬರುವುದರಿಂದ, ಇದು ಅತ್ಯಪೇಕ್ಷಿತ ಕೆಲಸ ವೇದಗಳ ಅಸಮಾನ ಸಂಪತ್ತಿನ ಬಗ್ಗೆ ತಿಳಿಯದೆ ಒಬ್ಬನ ಜೀವನದ ಉದ್ದೇಶ ಪೂರ್ಣವಾಗುವುದೇ ಇಲ್ಲ ಹಾಗಾಗಿ ನಮ್ಮ ಪ್ರಾಚೀನ ಪರಂಪರೆ ಸಂಸ್ಕೃತಿಗಳನ್ನು ತಿಳಿಯಲು ವೇದಗಳ ಪ್ರಚಾರ ಅತಿ ಅಗತ್ಯವಾಗಿದೆ ತಮ್ಮ ಪ್ರಾಧಾನ್ಯ ಹಾಗೂ ಸರಿಯಾದ ಆಚರಣೆಯನ್ನು ದಿನೇದಿನೇ ಕಳೆದುಕೊಳ್ಳುತ್ತಿರುವ ವೈದಿಕ ವಿಧಿಗಳ ಆಚರಣೆಯ ಮೂಲಕ ವೇದಗಳನ್ನು ಪ್ರಯೋಗ ಮಾರ್ಗದಲ್ಲಿ ಪ್ರಚಾರ ಮಾಡಬಹುದು ಹೀಗಾಗಿ ವೈದಿಕ ವಿಧಿಗಳ ಅರ್ಥ ಹಾಗೂ ಸೂಕ್ತ ಆಚರಣೆಯಲ್ಲಿ ಅವಧಾರಣೆಯುಂಟಾಗಬೇಕು ಅವುಗಳ ಬಗ್ಗೆ ಧಾರ್ಮಿಕ ತಾತ್ವಿಕ, ಸಾಮಾಜಿಕ, ವೈಜ್ಞಾನಿಕ ದೃಷ್ಟಿಕೋನ ಬೆಳೆಯಬೇಕು ವೇದಗಳನ್ನು ತತ್ವಶಃ ಪ್ರಚಾರ ಮಾಡಲು, ವಿಚಾರಗೋಷ್ಠಿಗಳು – ವೇದಗಳ ಪ್ರಾಮುಖ್ಯ ಹಾಗೂ ಸಮಸ್ಯೆಗಳ ಬಗ್ಗೆ – ನಡೆದು ಬರಬೇಕು ಈ ದಿಸೆಯಲ್ಲಿ ವೇದಗಳ ಬಗ್ಗೆ ಲೇಖನಗಳನ್ನು ಪ್ರಕಟಿಸುವುದರಿಂದ ಉಪಕಾರವಾದೀತು ಪ್ರಾಥಮಿಕ ಹಂತದ ಶಿಕ್ಷಣದೊಂದಿಗೇ ವೇದಗಳ ಪ್ರಚಾರ ನಡೆಯಬೇಕು ಪ್ರಾಥಮಿಕ ಶಾಲಾ ಪಠ್ಯಗಳಲ್ಲಿ ಹಲವಾರು ವೇದಮಂತ್ರಗಳನ್ನು ಅವುಗಳ ಪ್ರಾಂತೀಯ ಭಾಷಾನುವಾದಗಳೊಡನೆ ಸೇರಿಸಬೇಕು ಜೊತೆಗೇ ಶಾಲಾ ವಿದ್ಯಾರ್ಥಿಗಳಿಗೆಂದು ವೈದಿಕ ಪ್ರಾರ್ಥನೆಗಳನ್ನು ಸೂಚಿಸಬೇಕು ಇದರಿಂದಾಗಿ ಅವರಲ್ಲಿ ವೈದಿಕ ಸಂಸ್ಕೃತಿಯ ಬಗ್ಗೆ ಪ್ರೇಮ ಹಾಗೂ ತೀವ್ರ ಆಸಕ್ತಿಯನ್ನುಂಟುಮಾಡಿದಂತಾಗಿ ವೈದಿಕ ಸಾಹಿತ್ಯದ ಸಂಪತ್ತನ್ನು ತಿಳಿಯಲು ಪ್ರಚೋದನೆ ಉಂಟಾಗುತ್ತದೆ ನಮ್ಮ ಮಕ್ಕಳ ಮನಸಿನಲ್ಲಿ ಬಿತ್ತಿದ ಈ ವೈದಿಕ ವಿಚಾರಬೀಜ ಅವರ ಯವ್ವನದಲ್ಲಿ ಪೂರ್ಣ ಬೆಳೆಯುತ್ತದೆ ಜೊತೆಗೇ ಪ್ರೌಢ ಶಾಲೆಗಳಲ್ಲಿ ಅವರವರ ಬುದ್ಧಿಯ ಮಟ್ಟಕ್ಕೆ ತಕ್ಕಂತೆ ವೈದಿಕ ಪಠ್ಯಗಳ ಹಲವು ಭಾಗಗಳನ್ನು ಅವರ ಪಾಠ ಪ್ರವಚನ ವಿಷಯಗಳಲ್ಲಿ ಸೇರಿಸಬೇಕೆಂದು ಸೂಚಿಸಬಹುದು ಇದರಿಂದಾಗಿ ವೈದಿಕ ವಿಚಾರಗಳು ನಮ್ಮ ವಿದ್ಯಾರ್ಥಿಗಳ ಮನದಲ್ಲಿ ನಿರಂತರವಾಗಿರುವಂತೆ ಆಗುತ್ತದೆ ಪ್ರಸ್ತುತ ಶತಮಾನದ ವಿದ್ಯಾರ್ಥಿಯ ಯುವ ಮನವನ್ನು ತಾರ್ಕಿಕವಾಗಿ ಪ್ರಭಾವಿಸುವ ಪಂಡಿತ ಮಧುಸೂದನ ಓಝಾ ಮೊದಲಾದ ವಿದ್ವಾಂಸರ ವೈಜ್ಞಾನಿಕ ಹಾಗೂ ಯೌಗಿಕ ದೃಷ್ಟಿಕೋನ ನಮ್ಮ ಆಸಕ್ತಿಗೆ ಅರ್ಹವಾ

ೀರೆ ಜೊತೆಗೇ ವೇದಗಳ ಪ್ರಚಾರದಲ್ಲಿ ವೇದ
ಗಳ ಬಗೆಗಿನ ಸಭೆ, ಸಮಾವೇಶ, ಸಮ್ಮೇಳನ,
ವಿಚಾರಗೋಷ್ಠಿಗಳು ಅರ್ಥಪೂರ್ಣ ಪಾತ್ರವಹಿಸ
ಬಲ್ಲವು

ದಕ್ಷಿಣದ ಮತ್ತು ಉತ್ತರದ ವೈದಿಕ ಪಾಠ
ಶಾಲೆಗಳು, ಧಾರವಾಡದ ಶಂಕರಾಚಾರ್ಯ
ಪಾಠಶಾಲೆ ನರವರದ (ಉ.ಪ್ರ) ಸಾಂಗ ವೇದ
ಮಹಾವಿದ್ಯಾಲಯ ಮೊದಲಾದವು - ದಕ್ಷಿಣದ
ಧಾರ್ಮಿಕ ಮಠಗಳು ಪರಿಶೋಧನಾಕೇಂದ್ರಗಳು,
ವಾರಣಾಸಿಯ ಸಂಪೂರ್ಣಾನಂದ ಸಂಸ್ಕೃತ ವಿಶ್ವ
ವಿದ್ಯಾಲಯ, ದರ್ಭಾಂಗದ ಕಾಮೇಶ್ವರ ಸಿಂಗ್
ಸಂಸ್ಕೃತ ವಿಶ್ವವಿದ್ಯಾನಿಲಯ, ತಿರುಪತಿಯ
ಕೇಂದ್ರೀಯ ಸಂಸ್ಕೃತ ವಿಶ್ವವಿದ್ಯಾಲಯ, ಸಂಸ್ಕೃತ
ಅಕಾಡಮಿ, ಕೇಂದ್ರ ರಾಜ್ಯಸರ್ಕಾರಗಳು ಮೊದ
ಲಾದವು - ವೇದಗಳ ಸಂರಕ್ಷಣೆ ಹಾಗೂ ಪ್ರಚಾ
ರವನ್ನು ಅರ್ಹರೀತಿಯಲ್ಲಿ ಕೈಗೆತ್ತಿಕೊಳ್ಳುವ ಜವಾ
ಬ್ದಾರಿಯನ್ನು ಹೊರಬೇಕೆಂದು ಆಶಿಸಬಹುದು

ವೇದಗಳ ಸಮರ್ಪಕವಾದ ಹಾಗೂ ತಪ್ಪಿಲ್ಲದ
ಅಧ್ಯಯನದಿಂದ ವೇದಗಳ ಅಪಾರ್ಥ, ಅನನ್ಯ
ಯಾರ್ಥಗಳಿಗೆ ಎಡೆಯಿರದು ಎಂಬುದನ್ನು ಬಿಡಿಸಿ
ಹೇಳಬೇಕಿಲ್ಲ ಸೂಕ್ತವಲ್ಲದ ಮಾರ್ಗ ಹಾಗೂ
ತಪ್ಪು ಗ್ರಹಿಕೆಗಳ ಮೂಲಕ ಪಡೆದ ಆಧು
ನಿಕ ವಿದ್ವಾಂಸರ ವೈವಿಧ್ಯಮಯ ದೃಷ್ಟಿ ಕೋನ
ಗಳು ವೈದಿಕ ಅಧ್ಯಯನದ ವಿವಿಧ ಅಂಶಗಳಲ್ಲಿ
ವಿದ್ವಾಂಸರನ್ನೂ ವೈದಿಕ ವಾಚಕರನ್ನೂ ತಪ್ಪುದಾರಿ
ಗೆಳೆದು ಭ್ರಾಂತಗೊಳಿಸುತ್ತಿವೆಯೆಂಬುದು ವಾಸ್ತವ
ವೈದಿಕ ಧರ್ಮದ ಅಧ್ಯಯನದಲ್ಲಿನ ಅನೌಚಿತ್ಯ
ವನ್ನು ಕುರಿತು ಸರ್ ಆರ್ಥರ್ ಬೆರ್ರಿಡೇಲ್
ಕೀತ್ ಅವರು ಹೇಳುವ ಮಾತು ಬಹು ಸೂಕ್ತ
ವಾಗಿದೆ

"ಸರ್ ಫ್ರೇಜರ್ ಹಾಗೂ ಪ್ರೊ|| ಎಸ್
ರೈನಾಚ್ ಅವರುಗಳು ತಮ್ಮ ಧಾರ್ಮಿಕ ಸಿದ್ಧಾಂ
ತಗಳಲ್ಲಿ ವೇದ ಧರ್ಮದ ಅನನ್ಯಸಾಧಾರಣ
ಮೌಲ್ಯಗಳನ್ನು, ಧಾರ್ಮಿಕ ನಂಬಿಕೆಗಳ ವಿದ್ಯಾ
ರ್ಥಿಗಳಾಗಿ ಸಂಪೂರ್ಣವಾಗಿ ನಿರ್ಲಕ್ಷಿಸಿದ್ದೇ ಕಾರ
ಣವಾಗಿ, ಧರ್ಮದ ಹುಟ್ಟಿನ ಬಗ್ಗೆ ತಮ್ಮ ಪ್ರಬಂ
ಧಗಳಲ್ಲಿ ಸರ್ ವಿಲಿಯಂ ರಿಡ್ಜ್‌ವೇ ಅವರು
ಅದನ್ನು ಪರಿಪೂರ್ಣ ತಪ್ಪಾಗಿ ಅರ್ಥೈಸುವಂತಾ
ಯಿತು"

***

# ನಮ್ಮ ದೇಶದಲ್ಲಿ ಸಾಮವೇದಾಧ್ಯಯನ

-ಎಸ್ ಪಂಚಾಪಕೇಶ ಶಾಸ್ತ್ರಿ - ಕುಂಭಕೋಣ

ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳುತ್ತಾನೆ - ವೇದಾನಾಂ ಸಾಮವೇದೋಸ್ಮಿ" ಪಾರ್ವತಿಯನ್ನು "ಸಾಮಗಾನ ಪ್ರಿಯಾಯೈ ನಮಃ" ಎಂದು ಆಕೆಗೆ ಸಾಮಗಾನದ ಬಗ್ಗೆ ಇರುವ ಪ್ರೇಮವನ್ನು ಹೇಳುತ್ತ ಲಲಿತಾಸಹಸ್ರನಾಮದಲ್ಲಿ ಪೂಜಿಸಲಾಗುತ್ತದೆ "ಸಾಮಗಾ. ಅನವರತಂ ಪ್ರಿಯಾಃ ಯಸ್ಯಾ ಸಾ" - ಇದು ಸಾಮಗಾನದ ಬಗ್ಗೆ ಆಕೆಯ ಪ್ರೇಮವನ್ನು ಸೂಚಿಸುತ್ತದೆ ಬಹುತೇಕ ಯಜ್ಞಗಳ ಹೆಸರುಗಳೂ ಸಾಮ ವೇದದ ಆಧಾರದಲ್ಲಿ ಉಂಟಾಗಿವೆ ಬ್ರಾಹ್ಮಣರ ಹುಟ್ಟೂ ಸಾಮವೇದದ ಆಧಾರ ದಿಂದಾಗಿದೆ ಇಂತಹ ಸಾಮವೇದ 1000 ಶಾಖೆಗಳನ್ನು ಹೊಂದಿದೆ ಇವುಗಳಲ್ಲಿ ಮೂರನ್ನು ಮಾತ್ರ ಅಧ್ಯಯನ ಮಾಡಲಾಗುತ್ತಿದೆ ಕೌಥುಮ ಶಾಖೆ, ರಾಣಾಯನೀಯ ಶಾಖೆ, ಮತ್ತು ಜೈಮಿನೀಯಶಾಖೆ ದೇಶದ ದಕ್ಷಿಣ ಬಾಗದಲ್ಲಿ ಕೌಥುಮಶಾಖೆ ಪ್ರಚಾರದಲ್ಲಿದೆ

ಮಿಳುನಾಡಿನ ತಿರುಚ್ಚಿಯ ಬಳಿಯ ಶ್ರೀರಂಗದಲ್ಲಿ ಜೈಮಿನೀಯ ಶಾಖೆಯು ವಾಗಿದೆ ಇನ್ನೊಂದು ರಾಣಾಯನೀಯ ಶಾಖೆ ಉತ್ತರದೇಶದಲ್ಲಿ ಮಾತ್ರ ಪ್ರಚಲಿತವಾಗಿದೆ ದಕ್ಷಿಣದಲ್ಲಿ ರಾಣಾಯನೀಯ ಶಾಖೆಯನ್ನು ಯಾರೂ ಅಧ್ಯಯನ ಮಾಡಿಲ್ಲ ಸಾಮವೇದಕ್ಕೆ ಎಂಟು ಬ್ರಾಹ್ಮಣಗಳಿವೆ ಆದರೆ ದಕ್ಷಿಣದಲ್ಲಿ ಹಲವರಿಗೆ ಮಾತ್ರ ಈ ಅಂಶ ತಿಳಿದಿರೆ ಸಾಮಗಾನದಲ್ಲಿ ದಕ್ಷಿಣ ಮಾರ್ಗವನ್ನೇ ಅನುಸರಿಸಬೇಕು ಮೇಲೆ ಹೇಳಿದ ಕಾರಣಗಳಿಂದ ಸಾಮವೇದದ ಅಧ್ಯಯನ ದೇಶದಲ್ಲಿ ಹೆಚ್ಚಾಗಬೇಕಿದೆ

***

# ಯಜುರ್ವೇದೀಯ ಸಾಹಿತ್ಯ ಪ್ರಕಟನೆ

ಡಾ|| ಎಚ್ ಜಿ ರಾನಡೆ ಪೂನಾ

ಅಗ್ನಿಹೋತ್ರ, ದರ್ಶಪೂರಣಮಾಸ ಮೊದಲಾದ ಶ್ರೌತವಿಧಿಗಳ ಆಚರಣೆಗೆ ಮಾತ್ರವೇ ಒತ್ತು ನೀಡುತ್ತದೆ ಶ್ರೌತವಿಧಿಗಳ ಬಗ್ಗೆ ಪ್ರಕಟ ಆಗಿರುವ ಎಲ್ಲ ಸಾಹಿತ್ಯವೂ ಒಂದಲ್ಲ ಒಂದು ರೀತಿಯಲ್ಲಿ ಯಜುರ್ವೇದಕ್ಕೆ ಸಂಬಂಧಿಸಿದ್ದಾಗಿದೆ

ಯಜುರ್ವೇದ ಅಥವಾ ಯಜ್ಞವಿಧಿಗಳಲ್ಲಿ ಮುಖ್ಯವಾಗಿ ಅಧ್ವರ್ಯುವಿನಿಂದ ಹೇಳಲ್ಪಡುವ ಸೂತ್ರಗಳು ಎರಡು ವಿಭಾಗಗಳಲ್ಲಿ ವಿಂಗಡಿತವಾಗಿವೆ ಕೃಷ್ಣಯಜುರ್ವೇದ ಹಾಗೂ ಶುಕ್ಲ ಯಜುರ್ವೇದ ಎರಡೂ ಬೇರೆ ಬೇರೆ ಸಂಹಿತೆಗಳನ್ನೂ ಬ್ರಾಹ್ಮಣಗಳನ್ನೂ ಶ್ರೌತ ಸೂತ್ರಗಳನ್ನೂ ಒಳಗೊಂಡಿವೆ ಷಡಂಗಗಳಲ್ಲಿ ಒಂದಾದ ಕಲ್ಪಸೂತ್ರಗಳಲ್ಲಿ ಗೃಹವಿಧಿ ಸಂಸ್ಕಾರಗಳನ್ನೂ ಹೇಳಲಾಗಿದೆ ಅವುಗಳ ಸಂಹಿತೆಗಳಿಂದಲೂ ಸೂತ್ರಗಳನ್ನು ಬಳಸಲಾಗಿದೆ ಈ ಎರಡು ಶಾಖೆಗಳಿಗೆ ತಮ್ಮವೇ ಆದ ಪ್ರತಿಶಾಖ್ಯ, ಶಿಕ್ಷಾಗಳೂ ಇವೆ

ಶುಕ್ಲ ಯಜುರ್ವೇದಕ್ಕಿಂತಲೂ ಕೃಷ್ಣ ಯಜುರ್ವೇದದಲ್ಲಿ ವೈವಿಧ್ಯವುಂಟು ಶುಕ್ಲ ಯಜುರ್ವೇದಕ್ಕೆ ಎರಡು ಪದ್ಧತಿಗಳಿದ್ದರೆ ಕೃಷ್ಣಯಜುರ್ವೇದಕ್ಕೆ ನಾಲ್ಕು ಪದ್ಧತಿಗಳಿವೆ

***

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ – ಏಪ್ರಿಲ್ 1992

**ಉಪವಾಸ**
-ಕೆ ಕೇಶವಮೂರ್ತಿ

**ರಾಮಕಥೆಯ ವ್ಯಾಪ್ತಿ**
-ಆದ್ಯ ರಾಮಾಚಾರ್ಯ

**ಸಮರ್ಥ ರಾಮದಾಸರು**
-ಬಿ ಎ ಗುಡಿ

**ಶ್ರೀಮದ್ರಾಮಾಯಣ ಮಹಿಮೆ**
-ಕೆ ಕೇಶವನ್

**ಗೋರೆಬಾಳರ ದಾಸಸಾಹಿತ್ಯಸೇವೆ**
-ಪ್ರೊ|| ವಸಂತ ಕುಷ್ಟಗಿ

**ಜೊತೆಗೆ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ** ಬೆಲೆ ರೂ 1-00 ಮಾತ್ರ

ವಿಶೇಷ ಸೂಚನೆ ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ ವಾರ್ಷಿಕ ಚಂದಾ ರೂ 12-00 ಮಾತ್ರ ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು ಸಂಪಾದಕರು
ತಿ ತಿ ದೇ ತಿರುಪತಿ

# ತಿಂಗಳಿನ ಮುಖ್ಯದಿನಗಳು

## ಏಪ್ರಿಲ್ – 1992

| | | |
|---|---|---|
| 4 | ಶನಿವಾರ | ತಿರುಪತಿಯಲ್ಲಿ ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವದಲ್ಲಿ ಗರುಡೋತ್ಸವ |
| 7 | ಮಂಗಳವಾರ | ಶ್ರೀ ಕೋದಂಡರಾಮಸ್ವಾಮಿ ರಥೋತ್ಸವ |
| 11 | ಶನಿವಾರ | ಶ್ರೀರಾಮನವಮಿ |
| 13 | ಸೋಮವಾರ | ಸೌರಮಾನ ಯುಗಾದಿ |
| 15 | ಬುಧವಾರ | ತಿರುಮಲೆಯಲ್ಲಿ ಸ್ವಾಮಿ ವಸಂತೋತ್ಸವಾರಂಭ |
| 16 | ಗುರುವಾರ | ತಿರುಮಲೆಯಲ್ಲಿ ಸ್ವಾಮಿಯ ರಜತ ರಥೋತ್ಸವ |
| 17 | ಶುಕ್ರವಾರ | ತಿರುಮಲೆಯಲ್ಲಿ ಸ್ವಾಮಿ ವಸಂತೋತ್ಸವ ಸಮಾಪ್ತಿ<br>ನಾಗಲಾಪುರಂ ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವ ಧ್ವಜಾರೋಹಣ |
| 21 | ಮಂಗಳವಾರ | ಶ್ರೀ ವೇದನಾರಾಯಣಸ್ವಾಮಿ ಗರುಡೋತ್ಸವ |
| 24 | ಶುಕ್ರವಾರ | ಶ್ರೀ ವೇದನಾರಾಯಣಸ್ವಾಮಿ ರಥೋತ್ಸವ |
| 25 | ಶನಿವಾರ | ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವದ ಧ್ವಜಾವರೋಹಣ |

# ಸಪ್ತಗಿರಿ

ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರಯಲಾಗಿರಬೇಕು **ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ**

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು

ಮಿಕ್ಕ ವಿವರಗಳಿಗೆ

ಸಂಪಾದಕರು
**ಸಪ್ತಗಿರಿ**
ತಿ ತಿ ದೇವಸ್ಥಾನ, ತಿರುಪತಿ ೫೧೭೫೦೭
ಚಿತ್ತೂರು ಜಿಲ್ಲ, ಆಂ ಪ್ರ

Edited and Published on behalf of T T Devasthanams by K Subba Rao, M A, and Printed at T T D Press,
By M Vijayakumar Reddy, Manager, T T D Press, Tirupati-517 507

